# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಮಾನವರಿಗೆ ಬುದ್ಧಿಶಕ್ತಿಯೊಂದು ವಿಶೇಷವಾಗಿರುವಾಗ ಆಲೋಚನೆಯನ್ನು ಹರಿಬಿಡದೆ, ಯಾವುದನ್ನೇ ಆಗಲಿ ಕೇವಲ ಅಂಧ ವಿಶ್ವಾಸದಿಂದ ನಂಬಿಬಿಡಬಾರದು. ಕುರುಡುನಂಬುಗೆ ಮನುಷ್ಯ ಪ್ರಯತ್ನವನ್ನೇ ಭಗ್ನಪಡಿಸುತ್ತದೆ. ಮುಖ್ಯವಾಗಿ ಜ್ಯೋತಿಷ್ಯದಲ್ಲಿ ಗಾಢ ನಂಬುಗೆ ಇಟ್ಟವನು ಸ್ವಂತ ಪ್ರಯತ್ನದಲ್ಲಿ ಶ್ರದ್ಧೆ ತೋರಿಸಲಾರನು. ಆದುದರಿಂದ ಒಬ್ಬ ಮನುಷ್ಯನಿಂದ ದುಷ್ಟ ಪ್ರಯತ್ನವನ್ನು ತಡೆದುಬಿಡಲಿಕ್ಕೂ ಕುರುಡು ನಂಬುಗೆಯನ್ನೇ ಆಯುಧವನ್ನಾಗಿ ಉಪಯೋಗಿಸಿಬಿಡಬಹುದು. ಅದು ಹೇಗೆಂದು ತಿಳಿಯಬೇಕಾದರೆ ಈ ಸಂಚಿಕೆಯಲ್ಲಿರುವ "ಅಖಂಡ ಜ್ಯೋತಿಷ್ಯ" ಎಂಬ ಬೇತಾಳ ಕಥೆಯನ್ನು ಓದಿ ನೋಡಿರಿ. ಎಲ್ಲದಕ್ಕೂ ಬುದ್ಧಿಶಕ್ತಿಯನ್ನು ಉಪಯೋಗಿಸಿ ಯಾವ ಕಾರ್ಯವನ್ನಾದರೂ ಮಾಡಬೇಕು ಎಂತಲೂ ತಿಳಿಯುತ್ತದೆ.

---

ಸಂಪುಟ: ೬೦ ಮೇ '೭೮ ಸಂಚಿಕೆ: ೫

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






CHITRA




ಸುಖದುಃಖೇ ಭಯಕ್ರೋಧೌ
ಲಾಭಾಲಾಭೌ ಭವಾಭವೌ
ಯಚ್ಚ ಕಿಂಚಿತ್ ತಥಾ ಭೂತಂ
ನನು ದೈವಸ್ಯ ಕರ್ಮತತ್ ೧.

ಕಾರಣ ಕಾಣದಂತಹ ಸುಖದುಃಖಗಳು, ಭಯ ಕ್ರೋಧಗಳು, ಲಾಭ ನಷ್ಟಗಳು, ಜನನ ಮರಣ ಇತ್ಯಾದಿಗಳೆಲ್ಲ ದೈವಿಕವಾಗಿ ಜರುಗುವಂಥವೇ.

ಋಷಯೋಪ್ಯುಗ್ರ ತಪಸೋ
ದೈವೇ ನಾಭಿಪ್ರಪೀಡಿತಾ
ಉತ್ಸೃಜ್ಯ ನಿಯಮಾಂ ಸ್ತೀವ್ರಾನ್
ಭ್ರಶ್ಯನ್ತೇ ಕಾಮ ಮುನ್ಯುಭಿಃ ೨.

ಅತ್ಯುಗ್ರವಾದ ತಪಸ್ಸು ಮಾಡುವ ಋಷಿಗಳು ಕೂಡಾ ದೈವಿಕಶಕ್ತಿಗೊಳಗಾಗಿ ತಪಸ್ಸು ಬಿಟ್ಟು ಮೋಹದಲ್ಲಿ ಸಿಕ್ಕಿ ಭ್ರಷ್ಟರಾಗುತ್ತಾರೆ.

ಅಸಂಕಲ್ಪಿತ ಮೇ ವೇಹ
ಯ ದಶಸ್ಮಾತ್ ಪ್ರವರ್ತತೇ
ನಿವರ್ತ್ಯಾರಂಭಮಾರಬ್ಧಂ
ನನು ದೈವಸ್ಯ ಕರ್ಮತತ್ ೩.

ಪ್ರಯತ್ನಪೂರ್ವಕವಾಗಿ ಪ್ರಾರಂಭಿಸಿದ ಕೆಲಸವನ್ನು ನಿಲ್ಲಿಸಿ, ಥಕ್ಕನೆ ಎಂದಿಗೂ ಊಹಿಸಲಾಗದ ಕೆಲಸ ಮಾಡುವುದು ದೈವಿಕವಾದುದೇ.

## ದೈವಘಟನೆ




೩೮

**ಗೂ**ಗೆ ರಾಜನಿಗೂ ಅದರ ನಾಲ್ಕು ಮಂತ್ರಿಗಳಿಗೂ ಸ್ಥಿರಜೀವಿಯ ಮೇಲೆ ವಿಶ್ವಾಸ ಕುದುರಿತು. ಅದುದರಿಂದ ಅವುಗಳು ಸ್ಥಿರಜೀವಿ ಕಾಗೆಯನ್ನು ತಮ್ಮ ಗುಹೆಗೆ ತೆಗೆದುಕೊಂಡುಹೋದುವು.

ದಾರಿಯಲ್ಲಿ ಸ್ಥಿರಜೀವಿ ತನ್ನೊಳಗೆ, "ರಕ್ತಾಕ್ಷಿ ಮಂತ್ರಿಯೊಬ್ಬನೇ ನನ್ನ ರಹಸ್ಯವನ್ನು ತಿಳಿದವನಾಗಿದ್ದಾನೆ. ಉಳಿದ ಮಂತ್ರಿಗಳಿಗೆ ಕಾಲ ಒಳಿತಾಗಿಲ್ಲದುದರಿಂದ ರಕ್ತಾಕ್ಷಿಯ ವಾದವನ್ನು ಅಲ್ಲಗಳೆದಿವೆ" ಎಂದುಕೊಂಡಿತು.

ಗುಡ್ಡದ ಗುಹೆಯನ್ನು ಸೇರಿದ ಮೇಲೆ ಅರಿಮರ್ದನ ಗೂಗೆ, "ಈ ಸ್ಥಿರಜೀವಿ ನಮ್ಮ ಒಳಿತನ್ನೇ ಬಯಸುವವನು. ಅವನು ನಮ್ಮ ಗುಹೆಯೊಳಗೆ ಯಾವ ಪ್ರದೇಶ ಕೇಳುವನೋ ಆ ಸ್ಥಳವನ್ನೇ ವಾಸಕ್ಕೆ ಬಿಟ್ಟುಕೊಡಿ" ಎಂದು ಹೇಳಿತು.

ಈ ಮಾತು ಕೇಳಿ ಸ್ಥಿರಜೀವಿ ಸಂತೋಷಪಡುತ್ತ ತನ್ನೊಳಗೆ ಹೀಗೆಂದುಕೊಂಡಿತು:

"ನಾನೇನೋ ಇವರ ವಿನಾಶಕ್ಕೆ ಉಪಾಯ ಮಾಡಲು ಬಂದವನು. ಇವರ ಮಧ್ಯ ಪ್ರದೇಶದಲ್ಲಿದ್ದರೆ ಎಲ್ಲರೂ ನನ್ನನ್ನು ಗಮನಿಸುತ್ತಾರೆ. ಮುಖ್ಯವಾಗಿ ರಕ್ತಾಕ್ಷಿಯೂ ಅವನ ಅನುಚರರೂ ನನ್ನನ್ನು ಸಾವಿರ ಕಣ್ಣುಗಳಿಂದ ಪರೀಕ್ಷಿಸಬಹುದು. ಆದುದರಿಂದ ದ್ವಾರದ ಬಳಿಯಲ್ಲೇ ಇದ್ದುಬಿಟ್ಟರೆ ಅವಸರವಾಗಿ ಒಳಗೆ ಬರುವ ಹೋಗುವವರಿಗೆ" ನನ್ನನ್ನು ಪರೀಕ್ಷಿಸಲು ಸಾಧ್ಯವಾಗದು.

ಹೀಗೆಂದುಕೊಂಡು ಅದು ಅರಿಮರ್ದನದೊಂದಿಗೆ, "ಮಹಾರಾಜ! ನಿಮ್ಮದು ದೊಡ್ಡ ಮನಸ್ಸು. ನನಗೆ ನಿಮ್ಮ ಗುಹೆಯ ದ್ವಾರದ ಹತ್ತಿರ ಸ್ವಲ್ಪ ಮಾತ್ರ ಸ್ಥಳ ಕೊಟ್ಟರೂ ಸಾಕು. ದಿನಾ ಬಂದು ತಮ್ಮ ದರ್ಶನ ಮಾಡುತ್ತೇನೆ" ಎಂದಿತು.

ಅರಿಮರ್ದನವು ಸ್ಥಿರಜೀವಿಯ ನಮ್ರತೆಯನ್ನು ನೋಡಿ, ಬಹಳ ಸಂತೋಷ ಪಟ್ಟು ಅದರ ಕೋರಿಕೆಯಂತೆಯೇ ನಡೆಯಿಸಿಕೊಟ್ಟಿತು. ಸ್ಥಿರಜೀವಿ ಮತ್ತೆ ಮೊದಲಿನಂತೆ ಆರೋಗ್ಯ ಸಂಪಾದಿಸಲಿಕ್ಕಾಗಿ ಅದಕ್ಕೆ ಪ್ರತ್ಯೇಕವಾದ ಆಹಾರ ಕೊಡಿಸಲಾಯಿತು.

ತನ್ನ ಸಲಹೆಯನ್ನು ಪೂರ್ತಿ ನಿರಾಕರಿಸಿ ಸ್ಥಿರಜೀವಿಯನ್ನು ಅಂದಣವೇರಿಸುವ ರಾಜನನ್ನು ನೋಡಿ ಚಿಂತಿ

ಸುತ್ತ ರಕ್ತಾಕ್ಷಿ, "ಮಹಾರಾಜಾ, ನೀನು ಬಂಗಾರದ ಹಿಚಿಕೆಹಾಕುವ ಪಕ್ಷಿಯನ್ನು ಬಿಟ್ಟುಬಿಟ್ಟ ರಾಜ ಮತ್ತು ಮಂತ್ರಿಗಳ ಹಾಗೆ ಬಹಳ ಅವಿವೇಕವಾಗಿ ವರ್ತಿಸುವಿ ಎಂದು ಹೇಳದೆ ಸುಮ್ಮನಿರಲು ನನ್ನಿಂದಾಗದು" ಎಂದಿತು. "ಅದೇನು ಕಥೆ?" ಎಂದು ರಾಜನೂ ಮಂತ್ರಿಗಳೂ ಕೇಳಿದರು. ಅವರಿಗೆ ರಕ್ತಾಕ್ಷಿ ಆ ಕಥೆಯನ್ನು ಹೀಗೆ ಹೇಳಿತು:

ಒಂದು ಕಾಲದಲ್ಲಿ ದೊಡ್ಡದೊಂದು ಬೆಟ್ಟದ ಬದಿಯ ಅರಣ್ಯದಲ್ಲಿ ಒಂದು ಹೊಸಬಗೆಯ ಪಕ್ಷಿ ವಾಸವಾಗಿತ್ತು. ಅದು ಬಂಗಾರದ ಹಿಚಿಕೆ ಹಾಕುತ್ತಿತ್ತು. ಒಬ್ಬ ಬೇಟೆಗಾರನು ಆ ವಿಷಯವನ್ನು ಕಂಡು ಹಿಡಿದನು. ಆ ವಿಚಿತ್ರ ಪಕ್ಷಿಯನ್ನು ನೋಡಿ ಅವನು ಆಶ್ಚರ್ಯಪಟ್ಟು, ಉರುಳು ಹಗ್ಗ ಬೀಸಿ ಅದನ್ನು ಹಿಡಿದು ಗೂಡಿಗೆ ಹಾಕಿಕೊಂಡನು. ಇಂತಹ ಪಕ್ಷಿ ತನ್ನಬಳಿಯಲ್ಲಿದ್ದರೆ, ರಾಜನಿಗೆ ಗೊತ್ತಾಗಿ ತನಗೆ ಶಿಕ್ಷೆ ಬೀಳಬಹುದೆಂದು ಹೆದರಿ, ಅದನ್ನು ರಾಜನ ಬಳಿಗೆ ತೆಗೆದುಕೊಂಡು ಹೋಗಿ, "ಮಹಾ ರಾಜರೆ, ಈ ಪಕ್ಷಿಯ ಹಿಚಿಕೆ ಉತ್ತಮವಾದ ಬಂಗಾರವಾಗುತ್ತದೆ. ಅದಕ್ಕಾಗಿ ನಾನು ಇದನ್ನು ತಮಗೆ ಕಾಣಿಕೆಯಾಗಿ ಕೊಡಬೇಕಾದುದು ನ್ಯಾಯವೆಂದು ಕೊಂಡು ತಂದೆನು" ಎಂದನು.

ರಾಜನು ಮಂತ್ರಿಗಳೊಂದಿಗೆ, "ಏನಾಶ್ಚರ್ಯ! ಇದರ ವಿಶೇಷವನ್ನು ನೋಡೋಣವೇ? ತೆಗೆದು ಕೊಳ್ಳೋಣವೇ?" ಎಂದು ಕೇಳಿದನು.

"ಮಹಾರಾಜರೆ, ಈ ಪಕ್ಷಿ ಅಂದರೇನು? ಬಂಗಾರದ ಹಿಚಿಕೆ ಹಾಕುವುದೆಂದರೇನು? ಎಲ್ಲಾದರೂ ಇದೆಯೆ? ಈ ಪಾಮರ ಮನುಷ್ಯನ ಮಾತನ್ನು ನೀವು ನಂಬಬಾರದು. ಏನೋ ಅದ್ಭುತ ಹೇಳಿ ಬಹುಮಾನ ಪಡೆಯುವ ಕೋರಿಕೆ ಅವನದು" ಎಂದರು ಮಂತ್ರಿಗಳು. ರಾಜನು ತನ್ನ ಮಂತ್ರಿಗಳ ಮಾತನ್ನು ಕೇಳಿ ಆ ಪಕ್ಷಿಯ ಕಾಣಿಕೆಯನ್ನು ನಿರಾಕರಿಸಿಬಿಟ್ಟನು.

ಅರಿಮರ್ದನವೂ ಅವನ ಮಂತ್ರಿಗಳೂ ಈ ಕಥೆಯನ್ನು ಕೇಳಿ ಸುಮ್ಮನೆ ನಕ್ಕುವೇ ಹೊರತು, ತಮ್ಮ ಅಭಿಪ್ರಾಯವನ್ನು ಬದಲಾಯಿಸಿ ಕೊಳ್ಳಲಿಲ್ಲ. ಬದ



ಲಾಗಿ ಸ್ಥಿರಜೀವಿಯ ಮೇಲೆ ಇನ್ನಷ್ಟು ಅನುತಾಪವೇ ಉಳ್ಳವರಾದರು.

ಅದನ್ನು ನೋಡಿ ರಕ್ತಾಕ್ಷಿ ತನ್ನ ಅನುಚರರೊಂದಿಗೆ ರಹಸ್ಯವಾಗಿ, "ಬೇಗದಲ್ಲೇ ಗೂಗೆಗಳ ರಾಜ್ಯ ನಾಶವಾಗಲಿದೆ. ಅವಸಾನಕಾಲ ಸಮೀಪವೇ ಕಾಣುತ್ತಿದೆ. ಇನ್ನು ರಾಜನನ್ನೂ ಮಂತ್ರಿಗಳನ್ನೂ ಕಾಪಾಡುವುದು ಸಾಧ್ಯವಿಲ್ಲದ ಮಾತಾಗಿದೆ. ರೋಗಿಗಳಿಗೆ ಔಷಧ ರುಚಿಸದಿರುವಂತೆ ಅವರಿಗೆ ಹಿತವಚನಗಳು ರುಚಿಸಲಾರವು. ವ್ಯವಧಿ ಇರುವಾಗಲೇ ನಾವು ಇಲ್ಲಿಂದ ಪಾರಾಗಿಬಿಡಬೇಕು. ಜನ್ಮಶತ್ರು ನಿಜವಾದ ಮಿತ್ರನಾಗುವುದು ಎಲ್ಲಿಯಾದರೂ ಉಂಟೇ ? ಹಿಂದೆ ಒಂದು ಗುಹೆ ಮಾತಾಡಿತಂತೆ !" ಎಂದಿತು.

"ಅದೆಂಥ ಕಥೆಯೋ ?" ಎಂದು ಅನುಚರರು ಕೇಳಿದುದಕ್ಕೆ ರಕ್ತಾಕ್ಷಿ ಆ ಕಥೆಯನ್ನು ಹೇಳಿತು :

ಒಂದು ಮಹಾರಣ್ಯದಲ್ಲಿ ಖರನಖರವೆಂಬ ಸಿಂಹ ಇದ್ದಿತು. ಒಂದು ದಿನ ಅದು ದಿನವೆಲ್ಲಾ ಅರಣ್ಯಪೂರಾ ತಿರುಗಿದರೂ ಕೊಂದುತಿನ್ನಲು ಅದಕ್ಕೆ ಯಾವ ಪ್ರಾಣಿಯೂ ದೊರಕಲಿಲ್ಲ. ಸೂರ್ಯನು ಅಸ್ತಮಿಸುವ ಹೊತ್ತು ಬಂತು. ಆಗ ದೊಡ್ಡದೊಂದು ಗುಹೆಯನ್ನು ಅದು ನೋಡಿತು.

"ರಾತ್ರಿಯಲ್ಲಿ ಈ ಗುಹೆಯೊಳಗೆ ಯಾವುದಾದರೊಂದು ಮೃಗವು ಬಾರದೇ ಇರದು. ಆಗ ಅದನ್ನು ಹಿಡಿದು ತಿಂದುಬಿಡುತ್ತೇನೆ" ಎಂದುಕೊಂಡು ಆ ಸಿಂಹವು ಗುಹೆಯೊಳಗೆ ಹೊಕ್ಕು ಕುಳಿತುಕೊಂಡಿತು.

ಆ ಗುಹೆಯೊಳಗೆ ಒಂದು ನರಿ ಬಂದು ಮಲಗುತ್ತಿತ್ತು. ಸ್ವಲ್ಪಹೊತ್ತಿಗೆ ಆ ನರಿ ಅಲ್ಲಿಗೆ ಬಂದು, "ಓ ! ಗುಹೇ ! ಓ ಗುಹೇ !" ಎಂದು ಕರೆಯಿತು.

ಸ್ವಲ್ಪಹೊತ್ತು ಸುಮ್ಮನಿದ್ದು ನರಿ ಮತ್ತೊಮ್ಮೆ ಹಾಗೆಯೇ ಕರೆಯಿತು. ಅದಕ್ಕೂ ಪ್ರತ್ಯುತ್ತರವೇನೂ ಬರಲಿಲ್ಲ.

ನರಿ ಮೂರನೇಸಾರಿ ಕರೆದು, "ನಾನು ರಾತ್ರಿ ಬಂದ ಕೂಡಲೇ ನಾನು ಕರೆದರೆ ಎಚ್ಚರದಲ್ಲಿದ್ದು ಪ್ರತ್ಯುತ್ತರ ಕೊಡಬೇಕು ಅಂತ ಒಪ್ಪಂದ ಮಾಡಿದ್ದು ಮರೆತೆಯಾ ಗುಹೆಯೇ ? ಈ ಮಾತಿನಂತೆ ನೀನು ನಡೆಯದಿದ್ದರೆ ನಾನು ಇದೇ ಷರತ್ತಿನ ಮೇಲೆ ಇನ್ನೊಂದು ಗುಹೆ ನೋಡಿಕೊಳ್ಳುತ್ತೇನೆ" ಎಂದಿತು.

ಈ ಮಾತು ಕೇಳಿದ ಹಸಿದ ಸಿಂಹ ತನ್ನಲ್ಲಿ. "ಈ ಗುಹೆ ಕರೆದರೆ ಓ ಗುಡುವುದೆಂದು ಕಾಣುತ್ತೆ. ನಾನೀಗ ಸುಮ್ಮನಿದ್ದರೆ ನರಿ ಹೊರಟುಹೋಗುತ್ತದೆ. ಉಪವಾಸದಲ್ಲಿ ಸಾಯಬೇಕಾದೀತು !" ಅಂದುಕೊಂಡು "ಓಯ್ !" ಎಂದು ಭಯಂಕರವಾಗಿ ಉತ್ತರ ಕೊಟ್ಟಿತು. ನರಿ ನಗಾಡುತ್ತ "ಹಾಗೇನು ಕತೆ ? ಗುಹೆ ಓಗೊಡುವುದನ್ನು ನಾನೆಲ್ಲಿಯೂ ಕೇಳಿಲ್ಲ !" ಎಂದು ಅತಿವೇಗವಾಗಿ ಓಡಿಹೋಯಿತು.



## ೧೯೩. ಯಿನ್ ರಾಜರ ಸಮಾಧಿ

ಚೀನಾದಲ್ಲಿಯ ಹೊನಾನ್ ರಾಷ್ಟ್ರಕ್ಕೆ ಸೇರಿದ ಅನ್ಯಾಂಗ್ ಸಮೀಪದಲ್ಲಿ ಕ್ರಿಸ್ತ ಪೂರ್ವ ೧೨ನೇ ಶತಾಬ್ದದ ಪ್ರಾರಂಭದಲ್ಲಿದ್ದ ಯಿನ್ ರಾಜರ ಸಮಾಧಿ ಹೊರಬಿದ್ದಿದೆ. ಅದು ಸ್ವಲ್ಪವೂ ಕೆಟ್ಟಿರಲಿಲ್ಲ. ಸಮಾಧಿಯಲ್ಲಿ ಸಿಕ್ಕಿದ ಕಂಚು ವಸ್ತುಗಳ ಮೇಲೆ ಕೆತ್ತಲಾದ ಹೆಸರುಗಳಿಂದ ಅದು ಯಿನ್ ರಾಜವಂಶದ ವುಟಿಂಗ್ ರಾಜನ ಪತ್ನಿಯದೆಂದು ತಿಳಿದಿದೆ. (ಯಿನ್ ವಂಶವು ಕ್ರಿ. ಪೂ. ೧೬ ರಿಂದ ೧೧ ನೇ ಶತಾಬ್ದದವರೆಗೆ ಪಾಲಿಸಿದೆ.)

ಇದರಲ್ಲಿ ಸುಮಾರು ೨೦೦ ಕಂಚು ಪಾತ್ರಗಳು ಸಿಕ್ಕಿವೆ. ಅವುಗಳಲ್ಲಿ ಮುಕ್ಕಾಲು ಭಾಗದಷ್ಟು ಪಾನಪಾತ್ರಗಳು. ಇವುಗಳಲ್ಲಿ ದೊಡ್ಡವು ಜತೆಜತೆಯಾಗಿವೆ. ಅವುಗಳ ಮೇಲೆ ಪ್ರಾಣಿಗಳ ತಲೆಗಳನ್ನು ಕೆತ್ತಿವೆ.

ಸಮಾಧಿಯಲ್ಲಿ ೪೦೦ ಬೆಲೆ ಬಾಳುವ ಕಲ್ಲಿನ ವಸ್ತುಗಳೂ, ಶಿಲಾವಸ್ತುಗಳೂ ಇವೆ. ಅವುಗಳಲ್ಲಿ ಹತ್ತು ಮನುಷ್ಯರ ಪ್ರತಿಮೆಗಳು. ಅವುಗಳಿಂದ ಆ ಕಾಲದ ದುಸ್ತುಗಳ ರೀತಿ ಗೊತ್ತಾಗುತ್ತದೆ. ವಿಚಿತ್ರವೆಂಬಂತೆ ಅವುಗಳಲ್ಲಿ ಒಂದು ಅರ್ಧನಾರೀಶ್ವರ ಪ್ರತಿಮೆಕೂಡಾ ಇದೆ. ಇತರ ಶಿಲ್ಪಗಳಲ್ಲಿ ಹುಲಿ, ಕರಡಿ, ಆನೆ, ಎತ್ತು, ಕುರಿ, ಕುದುರೆ, ಕೋತಿ, ಮೊಲ, ಹದ್ದು, ಗಿಳಿ ಮೊದಲಾದ ಪ್ರಾಣಿಗಳ ಬೊಂಬೆಗಳಿವೆ.





# ಅಖಂಡಜ್ಯೋತಿಷ್ಯ

ಶ್ರೀಲೆ ಸವೆದರೂ ಮಾನಸ ಶಿಲೆ ಸ್ವಲ್ಪವೂ ಸವೆಯದ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹಿಂದಿರುಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯುತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ರಾಜನೇ, ನಿನಗೆ ಮಾನವ ಪ್ರಯತ್ನದಲ್ಲಿ ಅಪಾರವಾದ ವಿಶ್ವಾಸವಿರುವಂತೆ ಕಾಣುತ್ತಾ ಇದೆ. ಆದರೆ ಮಾನವರಿಗೆ ತಿಳಿಯದಿರುವಂತಹ ದೈವ ನಿರ್ಣಯವೊಂದು ಬೇರೆಯೇ ಇದೆ ಗೊತ್ತಾ? ಆದಕ್ಕೆ ಇದಿರಿಲ್ಲ. ಆ ವಿಷಯವನ್ನು ನಿರೂಪಿಸಲಿಕ್ಕಾಗಿ ಒಂದು ಅದ್ಭುತ ಜ್ಯೋತಿಷ್ಯದ ವಿಷಯ ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭ ಮಾಡಿತು:

ಹಿಂದೆ ವಸಂತದೇಶದಲ್ಲಿ ಮಹಾವೀರನಾದ ರಾಜನೊಬ್ಬನಿದ್ದ. ಅವನು ಸಿಂಹಾಸನವನ್ನು ಏರಿದ ಕೂಡಲೇ ನೆರೆಯಲ್ಲಿರುವ ಹೇಮಂತ ರಾಜ್ಯದೊಂದಿಗೆ ಯುದ್ಧ ಮಾಡಬೇಕಾಗಿ ಬಂತು. ಆ ಯುದ್ಧದಲ್ಲಿ

## ಬೇತಾಳಕಥೆಗಳು

ಅವನೇ ಗೆದ್ದುಬಿಟ್ಟನು. ಹೀಗೆ ಅವನು ಪಟ್ಟವೇರಿದ ಕೂಡಲೇ ಎರಡು ದೇಶಗಳಿಗೂ ರಾಜನಾಗಿಬಿಟ್ಟನು.

ಯುದ್ಧದಲ್ಲಿ ವಿಜಯ ಲಭಿಸಿದ್ದೇನೋ ನಿಜವಾದರೂ ಉಭಯ ದೇಶಗಳಲ್ಲಿಯೂ ಜನನಷ್ಟ ಧನನಷ್ಟಗಳು ಅಪಾರವಾಗಿದ್ದುವು. ಹೀಗಿದ್ದರೂ ತಮ್ಮ ರಾಜನ ಉತ್ಸಾಹವು ಮೇರೆ ಮೀರುವಂತಿರುವುದನ್ನು ನೋಡಿ ಮಂತ್ರಿಗೆ ಚಿಂತೆಯಾಯಿತು. ಯುದ್ಧದ ರುಚಿ ನೋಡಿದ ಮಹಾ ವೀರನಾದ ಈ ರಾಜನು ಇನ್ನೂ ಇತರ ದೇಶಗಳೊಡನೆ ಯುದ್ಧಕ್ಕೆ ತಲೆ ಹಾಕುವನೇನೋ ? ಯಾವುದಕ್ಕೂ ಒಳ್ಳೆಯದೆಂದು ಮಂತ್ರಿ ಆಸ್ಥಾನ ಜ್ಯೋತಿಷ್ಯನೊಂದಿಗೆ ರಾಜನ ಜಾತಕ ಫಲವನ್ನು ನೋಡಿ ಹೇಳಬೇಕೆಂದು ಕೇಳಿಕೊಂಡನು.

ರಾಜನ ಇದಿರಿನಲ್ಲಿಯೇ ಜ್ಯೋತಿಷ್ಯನು ರಾಜನ ಜಾತಕ ನೋಡಿ ಹೀಗೆಂದನು :

"ಮಹಾ ಮಂತ್ರಿಗಳೇ, ನಮ್ಮ ಮಹಾ ರಾಜರಿಗೆ ಎರಡು ರಾಜ್ಯಗಳನ್ನಾಳುವ ಯೋಗಮಾತ್ರವೇ ಕಾಣುತ್ತಿದೆ. ಯಾವ ಕಾರಣದಿಂದಾಗಲೀ ಇವರು ಇನ್ನೊಂದು ಸಾರಿ ಯುದ್ಧ ಮಾಡಬೇಕಾಗಿಬಂದರೆ ಅಪಜಯವಾಗುವುದು, ಅಷ್ಟೇ ಅಲ್ಲದೆ ಎರಡು ರಾಜ್ಯಗಳೂ ಕೈಬಿಟ್ಟು ಹೋಗುವ ಸಂಭವವಿದೆ."

ಈ ಮಾತು ಕೇಳಿ ರಾಜನು, "ಹಾಗಾದರೆ ನಮ್ಮ ಪರಾಕ್ರಮವು ಅರಣ್ಯದಲ್ಲಿ ಸುರಿದ ಬೆಳುದಿಂಗಳಾಗಬೇಕಾದ್ದೇನು ?" ಎಂದನು ಶುಷ್ಕಸ್ವರದಿಂದ.

"ಅದಕ್ಕೊಂದು ಉಪಾಯ ಮಾಡೋಣ. ನಿಮ್ಮ ವೀರಪ್ರತಾಪಗಳು ವೃಥಾಹೋಗದಂತೆ, ಪ್ರತಿ ವರ್ಷವೂ ಯುದ್ಧ ವಿದ್ಯೆಗಳ ಪ್ರದರ್ಶನವನ್ನು ಏರ್ಪಡಿಸೋಣ. ತಮ್ಮೊಂದಿಗೆ ಸ್ಪರ್ಧಿಸಲು ದೇಶ ದೇಶಗಳಿಂದ ವೀರರನ್ನು ಆಹ್ವಾನಿಸೋಣ. ಮಹಾ ಮಹಾ ವೀರರನ್ನು ನೀವು ಸೋಲಿಸಿ ಕೀರ್ತಿಗಳಿಸಬಹುದು. ಯುದ್ಧದ ಬೀಭತ್ಸತೆಯಿಲ್ಲದೆ ಒಳ್ಳೆಯ ವಿನೋದವೂ ಆಗುತ್ತದೆ" ಎಂದನು ಮಂತ್ರಿ.

ರಾಜನು ಹಾಗೆಯೇ ಮಾಡುತ್ತ ಬಂದನು. ಪ್ರಾರಂಭದಲ್ಲಿ ಬೇರೆ ದೇಶಗಳ ರಾಜರು ವಸಂತ



ರಾಜನೊಂದಿಗೆ ಯುದ್ಧ ವಿದ್ಯೆಗಳಲ್ಲಿ ಸ್ಪರ್ಧಿಸಿ ಸೋತು ಹೋದರು. ಅವರಿಗೆ ಅವಮಾನದ ಭಾವನೆ ಬಾರದಂತೆ, ವಸಂತರಾಜನು ಅವರನ್ನು ಒಳ್ಳೆಯ ಸುಹೃದಯತೆಯಿಂದ ಸನ್ಮಾನಿಸಿ, ಗೌರವಿಸಿ, ಉಪಚರಿಸಿ ಕಳುಹಿಸುತ್ತಿದ್ದನು. ಅಂತಹ ಬಲವಂತನೊಂದಿಗೆ ಸ್ನೇಹ ಉಂಟಾದುದಕ್ಕೆ ಅನೇಕಮಂದಿ ರಾಜರಿಗೆ ಹೆಮ್ಮೆಯೇ ಅನಿಸಿತು. ಅಂತಹ ಬಲಿಷ್ಠ ರಾಜನು ತಮ್ಮ ಮೇಲೆ ಯುದ್ಧಕ್ಕೆ ಬರಲು ಎಣಿಸದಿರುವುದಕ್ಕೂ ಅವರಿಗೆ ಸಂತೋಷವಾಯಿತು.

ಹೀಗೆ ಅನೇಕ ವರ್ಷಗಳು ಕಳೆದುವು. ವಸಂತರಾಜನ ಬಳಿಯಲ್ಲಿ ಆಸ್ಥಾನ ಜ್ಯೋತಿಷ್ಯನಾಗಿದ್ದವನ ತಮ್ಮನು ಶಮಂತರಾಜನ ಆಸ್ಥಾನದಲ್ಲಿ ಜ್ಯೋತಿಷ್ಯನಾಗಿ ಸೇರಿಕೊಂಡನು. ಅವನೂ ಗಟ್ಟಿಗನಾದ ಜ್ಯೋತಿಷ್ಯನೇ.

ವಸಂತರಾಜನಿಗೆ ಗಂಡು ಮಕ್ಕಳು ಹುಟ್ಟಲೇ ಇಲ್ಲ. ಒಬ್ಬಳು ಮಗಳು ಮಾತ್ರವೇ ಬೆಳೆದು ದೊಡ್ಡವಳಾದಳು. ಅವಳು ಅತ್ಯಂತ ಸುಂದರಿಯೂ ಒಳ್ಳೆಯ ವಿದ್ಯಾನ್ವಿತೆಯೂ ಆದುದರಿಂದ ಅನೇಕ ಮಂದಿ ರಾಜಕುಮಾರರು ಅವಳನ್ನು ಮದುವೆಯಾಗಲು ಹಾತೊರೆದರು. ಅವಳಿಗಿರುವ ಇನ್ನೊಂದು ವಿಶೇಷವೇನೆಂದರೆ, ಎರಡು ರಾಜ್ಯಗಳ ಸಿಂಹಾಸನಗಳಿಗೂ ಅವಳೇ ವಾರಸುದಾರಳು.

ಶಮಂತರಾಜನು ಸಮರ್ಥನಾದ ಯುವಕನಾಗಿದ್ದನು. ಅವನು ಕೂಡಾ ವಸಂತರಾಜಕುಮಾರಿಯನ್ನು ಮದುವೆಯಾಗಬೇಕೆಂಬ ಲವಲವಿಕೆಯಲ್ಲಿದ್ದನು. ಆದರೆ ಅವನು ಚಿಕ್ಕ ರಾಜ್ಯದ ಅಲ್ಪ ಸೈನ್ಯದ ದುರ್ಬಲ ರಾಜನಾದುದರಿಂದ ವಸಂತರಾಜಕುಮಾರಿಯನ್ನು ವರಿಸಿಕೊಳ್ಳುವ ಅವಕಾಶ ಅವನಿಗೆ ಅಣುಮಾತ್ರವೂ ಇರಲಿಲ್ಲ. ಆದರೂ ಪೂರ್ತಿ ನಿರಾಶೆಗೊಳ್ಳುವುದಕ್ಕೆ ಮೊದಲು ತನ್ನ ಆಸ್ಥಾನ ಜ್ಯೋತಿಷ್ಯನೊಂದಿಗೆ ಆ ವಿಷಯವನ್ನು ಕುರಿತು ಪ್ರಸ್ತಾವಿಸಿ ನೋಡಿದನು.

ಜ್ಯೋತಿಷ್ಯನು ಅವನ ಜಾತಕವನ್ನು ಚೆನ್ನಾಗಿ ಪರಿಶೀಲಿಸಿ, "ಮಹಾರಾಜಾ, ತಮ್ಮ ಜಾತಕದಲ್ಲಿ



ತಾವು ಮೂರು ರಾಜ್ಯಗಳಿಗೆ ರಾಜರಾಗುವ ಯೋಗ ವಿದೆ. ಆದುದರಿಂದ ತಾವು ಏನು ಮಾಡಬೇಕೆಂದರೆ, ವಸಂತರಾಜನಿಗೆ ಆವನ ಮಗಳನ್ನು ನಿಮಗೆ ಕೊಟ್ಟು ಮದುವೆ ಮಾಡಬೇಕೆಂದೂ, ಅದಕ್ಕೆ ತಪ್ಪಿದ ಪಕ್ಷದಲ್ಲಿ ಯುದ್ಧಕ್ಕೆ ಸಿದ್ಧರಾಗಬೇಕೆಂದೂ ಸಮಾಚಾರ ಕಳುಹಿಸಿರಿ. ಆಮೇಲೆ ಏನು ನಡೆಯುವುದೋ ನೋಡುವಿರಂತೆ. ನನ್ನ ಜ್ಯೋತಿಷ್ಯ ಸುಳ್ಳಾದರೆ ನೀವು ಕೊಡುವ ಶಿಕ್ಷೆಗೆ ತಲೆಯೊಡ್ಡುತ್ತೇನೆ '' ಎಂದನು.

ಇಷ್ಟು ಖಂಡಿತವಾಗಿ ಹೇಳಿದ ಜ್ಯೋತಿಷ್ಯನ ಮಾತಿನ ಮೇಲೆ ನಂಬುಗೆಯಿಟ್ಟು, ಶಮಂತರಾಜನು ವಸಂತರಾಜನಿಗೆ ಹಾಗೆಯೇ ಹೇಳಿ ಕಳುಹಿಸಿದನು. ವಸಂತರಾಜನು ಮರುಮಾತಾಡದೆ, ಸಂತೋಷದಿಂದ ಒಪ್ಪಿ, ತನ್ನ ಕುಮಾರಿಯನ್ನು ಶಮಂತರಾಜನಿಗೆ ಕೊಟ್ಟು ವೈಭವದಿಂದ ಮದುವೆ ಮಾಡಿದನು. ಆದುದರಿಂದ ಶಮಂತರಾಜನಿಗೆ ಮೂರು ರಾಜ್ಯಗಳಿಗೆ ರಾಜನಾಗುವ ಯೋಗ ಉಂಟಾಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, " ಮಹಾರಾಜನೇ, ಈಗ ಹೇಳು. ವಸಂತರಾಜನಂತಹವನು. ಪ್ರತಾಪದಲ್ಲಿ ತನ್ನ ಕಾಲ ಉಗುರಿಗೂ ಸರಿಬಾರದ ಶಮಂತರಾಜನ ಬೆದರಿಕೆಗೆ ಹೆದರಿಕೊಂಡು ತನ್ನ ಕುಮಾರಿಯನ್ನು ಅವನಿಗೆ ಕೊಟ್ಟು ಮದುವೆ ಮಾಡಿದನೆಂದರೆ, ಅದು ದೈವಿಕ ಘಟನೆಯೆಂದೇ ಹೇಳಬೇಕಲ್ಲವೆ ? ಅಥವಾ ಪ್ರಾಯಮೀರಿದವನಾದುದರಿಂದ ಅವನಿಗೆ ತನ್ನ ವೀರಪ್ರತಾಪಗಳಲ್ಲಿ ವಿಶ್ವಾಸ ಹೋಯಿತೇ ? ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳಾಗಿ ಹೋಗುತ್ತದೆಂದು ತಿಳಿ !" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : " ವಸಂತರಾಜನಿಗೆ ಜ್ಯೋತಿಷ್ಯದಲ್ಲಿ ಗಾಢ ನಂಬುಗೆ ಇದ್ದಿತು. ಆದನ್ನು ಕುರುಡು ನಂಬುಗೆಯೆಂದೂ ಹೇಳಬಹುದು. ಆದುದರಿಂದಲೇ ಅವನು ಶಮಂತರಾಜನೊಂದಿಗೆ ಯುದ್ಧಕ್ಕೆ ಇಳಿಯಲಿಲ್ಲ. ಅವನಿಗೆ ತನ್ನ ಜಾತಕದಲ್ಲಿ ಗಟ್ಟಿ ನಂಬುಗೆ ಇದ್ದುದರಿಂದಲೇ ಅವನು ಮೂರನೇ ದೇಶವನ್ನು ಜಯಿಸುವ ಪ್ರಯತ್ನ ಮಾಡಲೂ ಇಲ್ಲ. ಶಮಂತದ ಆಸ್ಥಾನ ಜೋತಿಷ್ಯನಿಗೆ ಆ ರಹಸ್ಯವು ಗೊತ್ತಿತ್ತು. ಆದುದರಿಂದಲೇ ಅವನು ಶಮಂತರಾಜನಿಗೆ ಅಷ್ಟು ದೃಢವಾಗಿ ಜ್ಯೋತಿಷ್ಯ ಹೇಳಿದನು. ಇದರಲ್ಲಿ ದೈವಿಕ ಘಟನೆ ಎಂದು ಹೇಳಲು ಯಾವ ಸೂಚನೆಯೂ ಇಲ್ಲ."

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ, ಎಂದಿನಂತೆ ಮರದ ಕೊಂಬೆ ಹಿಡಿದು ನೇತಾಡಲು ತೊಡಗಿತು.



# ಸೋದರ ಪ್ರೇಮ

ಒಬ್ಬ ರಾಜನ ಹತ್ತಿರ ಕೆಲವಾರು ಮಂದಿ ಗುಲಾಮರಿದ್ದರು.

ಒಂದು ಸಾರಿ ಖಜಾನೆಯಲ್ಲಿ ಕೂಡಿದ್ದ ಧನವೆಲ್ಲಾ ಬರಿದಾಯಿತು. ಅದನ್ನು ತುಂಬಿಸಲಿಕ್ಕಾಗಿ, ಒಬ್ಬೊಬ್ಬ ಗುಲಾಮನೂ ಕಷ್ಟಪಟ್ಟು ಸಾವಿರ ರೂಪಾಯಿ ಸಂಪಾದಿಸಿಕೊಟ್ಟರೆ ಅವನಿಗೆ ಸ್ವಾತಂತ್ರ್ಯಕೊಟ್ಟು ಬಿಡುಗಡೆ ಮಾಡುವುದಾಗಿ ರಾಜನು ಹೇಳಿದನು.

ಆ ಗುಲಾಮರಲ್ಲಿ ಇಬ್ಬರು ಅಣ್ಣತಮ್ಮಂದಿರಿದ್ದರು. ತಮ್ಮನು ಬಲಹೀನನಾಗಿದ್ದನು. ಅಣ್ಣ ಒಳ್ಳೆಯ ಬಲಶಾಲಿ. ಅವನು ಚೆನ್ನಾಗಿ ಕಷ್ಟಪಟ್ಟು ಶ್ರಮಿಸಿ ಸಾವಿರ ರೂಪಾಯಿಗಳನ್ನು ಸೇರಿಸಿ, ರಾಜನಿಗೆ ಕೊಟ್ಟು, "ಇದನ್ನು ತೆಗೆದುಕೊಂಡು ನನ್ನ ತಮ್ಮನನ್ನು ಬಿಡುಗಡೆ ಮಾಡಬೇಕು ಪ್ರಭುವೆ" ಎಂದನು.

"ನೀನು ಶ್ರಮಪಟ್ಟು ಸಂಪಾದಿಸಿದ್ದನ್ನು ನಿನ್ನ ತಮ್ಮನಿಗಾಗಿ ಉಪಯೋಗಿಸುವೆ ಏಕೆ ?" ಎಂದು ರಾಜನು ಆಶ್ಚರ್ಯದಿಂದ ಕೇಳಿದನು.

"ನನ್ನ ತಮ್ಮನಿಗೆ ಶಕ್ತಿಯಿಲ್ಲ. ಕೆಲಸ ಮಾಡಲಾರ. ನಾನು ಇನ್ನೂ ಕೆಲಸ ಮಾಡಿ, ನನ್ನ ಬಿಡುಗಡೆಯನ್ನೂ ಪಡೆದುಕೊಳ್ಳಬಲ್ಲೆ. ನಾನು ಬಿಡುಗಡೆಯಾಗಿ ಹೋಗಿಬಿಟ್ಟರೆ ತಮ್ಮನ ಸಂಗತಿ ಯಾರು ನೋಡುತ್ತಾರೆ ?" ಎಂದ ಅಣ್ಣ.

ರಾಜನು ಅವನ ಸೋದರ ಪ್ರೇಮವನ್ನು ನೋಡಿ, ಹಣ ತೆಗೆದುಕೊಳ್ಳದೆಯೇ ಆ ಅಣ್ಣತಮ್ಮಂದಿರಿಗೆ ಸ್ವಾತಂತ್ರ್ಯಕೊಟ್ಟು ಕಳುಹಿಸಿದನು.





# ಅಂಬಿಕೆಯ ವಾಣಿ

ಶ್ರೀಪುರವೆಂಬ ಗ್ರಾಮವು ತುಂಬಾ ಸುಭಿಕ್ಷವಾಗಿತ್ತು. ಊರೊಳಗೆ ಹೊಲಗದ್ದೆಗಳು ಹುಲುಸಾಗಿ ಬೆಳೆಯುತ್ತ ದನಲಕ್ಷ್ಮಿ ಧಾನ್ಯಲಕ್ಷ್ಮಿಯರು ತಾಂಡವಿಸಿಕೊಂಡಿದ್ದರು. ಊರೊಳಗಿನವರ ಗೌರವಕ್ಕೆ ಪಾತ್ರರಾಗಿ, ದೊಡ್ಡವರಾಗಿ ಇರುವವರು ರಾವ್‌ಬಹದ್ದೂರ್ ಜಮೀನ್ದಾರರೇ. ಊರೊಳಗಿನವರಿಗೆ ಅವರ ಮಾತಿಗೆ ಇದಿರೇ ಇಲ್ಲ. ಯಾರ ಮನೆಯಲ್ಲಿ ಏನು ತಂಟೆ ತಕರಾರುಗಳಿದ್ದರೂ ರಾವ್‌ಬಹಾದ್ದೂರರ ನಾಲಗೆಯ ತುದಿಯಲ್ಲೇ ತೀರಿಹೋಗುತ್ತಿದ್ದುವು. ಬಹಳವಾಗಿ ಗ್ರಾಮದವರೆಲ್ಲ ನಿರಕ್ಷರಕುಕ್ಷಿಗಳಾದುದರಿಂದ, ಆ ಗ್ರಾಮದೊಳಗೆ ಏನೇನು ಸದುಪಾಯಗಳು ಬಂದಿದ್ದುವೋ ಅವೆಲ್ಲದಕ್ಕೂ ಜಮೀನ್ದಾರ ರಾವ್ ಬಹದ್ದೂರರೇ ಬಾಧ್ಯಸ್ಥರು.

ಆ ಗ್ರಾಮದಲ್ಲಿ ಒಂದು ಅಂಬಿಕಾ ಅಮ್ಮನವರ ದೇವಾಲಯವನ್ನು ಎಬ್ಬಿಸಿದವರು ಕೂಡಾ ರಾವ್ ಬಹದ್ದೂರರೇ. ಮೊದಲು ಅಂತಹ ದೇವಾಲಯವು ಅಲ್ಲಿರಲಿಲ್ಲ. ಹಳೇಕಾಲದ ಒಂದು ಮುರುಕು ಅಮ್ಮನವರ ಗುಡಿ ಇದ್ದಿತು. ಅದೇ ಈಗ ಅಂಬಿಕಾ ದೇವಾಲಯವಾಗಿ ಬದಲಾಯಿಸಿತ್ತು. ಆ ದೇವಾಲಯದ ನಿರ್ಮಾಣದಲ್ಲಿ ಪ್ರತಿ ಗ್ರಾಮಸ್ಥನ ಹಣವೂ ಅಷ್ಟೋ ಇಷ್ಟೋ ಬಿದ್ದಿತ್ತು. ಗ್ರಾಮಸ್ಥರು ಪ್ರತಿ ವರ್ಷವೂ ಕೊಟ್ಟ ಚಂದಾ ಹಣದಿಂದ ಅಂಬಾಮ್ಮನವರಿಗೆ ಲಕ್ಷ ರೂಪಾಯಿ ಬೆಲೆಬಾಳುವ ನಗಗಳಾಗಿದ್ದುವು. ಆ ನಗಗಳನ್ನು ಮೊದಲನೇಸಾರಿ ದೇವಿಗೆ ಅಲಂಕರಿಸುವ ದಿನ ಭಾರಿ ಉತ್ಸವ ನಡೆದಿತ್ತು. ಸುತ್ತುಮುತ್ತಲಿನ ಹತ್ತಾರು ಊರುಗಳ ಜನರು ಬಂದು ದಟ್ಟೈಸಿದ್ದರು. ಜಮೀನ್ದಾರ ರಾವ್‌ಬಹದ್ದೂರರ ಪುಣ್ಯದಿಂದ ಆ ಪ್ರಾಂತದಲ್ಲಿ ಅಂತಹ ದೇವಾಲಯ ಇನ್ನೊಂದಿಲ್ಲದಂತಾಗಿತ್ತು. ಗುಡಿಯೊಳಗೆ ಬೆಲೆಬಾಳುವ ನಗಗಳ ಭಂಡಾರ ಕೋಣೆ ಇರುವ ಕಾರಣದಿಂದ ಗುಡಿಗೆ ಬಲವಾದ ಬೀಗವಿದ್ದಿತು. ಅದರ ಬೀಗದ ಕೈ ಗುಡಿ ತೆರೆದಿದ್ದಾಗ ಅರ್ಚಕರ ಬಳಿಯಲ್ಲಿಯೂ, ಉಳಿದ ವೇಳೆಯಲ್ಲಿ ಜಮೀನ್ದಾರರ ಹತ್ತಿರವೂ ಇರುತ್ತಿತ್ತು. ದೇವಾಲಯಂದಿಂದಾಗಿ ರಾವ್‌ಬಹಾದ್ದೂರರ ಕೀರ್ತಿ ಆಕಾಶಕ್ಕೇರಿತು.

ಒಂದು ದಿನ ರಾತ್ರಿ ಇದ್ದಕ್ಕಿದ್ದ ಹಾಗೆ ಅಮ್ಮನವರ ನಗಗಳೆಲ್ಲ ಮಟಮಾಯವಾಗಿ ಹೋದುವು. ಅರ್ಚಕರು ದೇವಿಯ ಅಲಂಕಾರಕ್ಕಾಗಿ ದೇವಾಲಯಂದ

ಬಿ. ಎನ್. ರಾವ್

ಬಾಗಿಲು ತೆರೆದು ಒಳಹೊಕ್ಕು ಭಂಡಾರದಲ್ಲಿ ನಗಗಳು ಖಾಲಿಯಾಗಿರುವುದನ್ನು ನೋಡಿ ತಲೆಬಡೆದು ಕೊಂಡರು. ಅವರು ಓಡುತ್ತಾ ಹೋಗಿ ಈ ಸಂಗತಿ ಯನ್ನು ರಾವ್‌ಬಹಾದ್ದೂರರೊಂದಿಗೆ ಹೇಳಿದರು. ಅವರು ತಮ್ಮ ಕಿವಿಗಳನ್ನು ತಾವೇ ನಂಬಲಾರದೆ ಹೋದರು. ಬಕ್ಕನೆತ್ತಿ ಬರಿ ಮೈಯಿಂದಲೇ ಗುಡಿಯ ಕಡೆಗೆ ಓಡಿಬಂದರು.

ಮರು ನಿಮಿಷದಲ್ಲೇ ಈ ಸಮಾಚಾರ ಊರೆಲ್ಲಾ ಹರಡಿಬಿಟ್ಟಿತು. ಎಲ್ಲರ ಮುಖದಲ್ಲಿಯೂ ಚಿಂತೆಯೂ, ಭಯವೂ ಕುಣಿಯುತ್ತಿದ್ದುವು. ಎಲ್ಲರೂ ಎಷ್ಟೋ ಭಕ್ತಿಯಿಂದ ಚಂದಾ ಹಾಕಿಕೊಂಡು ಅಂಬಾಮ್ಮನವರಿಗೋಸ್ಕರ ಮಾಡಿಸಿದ ಲಕ್ಷ ರೂಪಾಯಿ ಬೆಲೆಯ ದಿವ್ಯಾಭರಣಗಳು ಮಾಯ ವಾಯಿತೆಂದರೆ ಸಾಮಾನ್ಯವೇ? ಅವುಗಳನ್ನು ಜಮೀ ನ್ದಾರರೂ, ಅರ್ಚಕರೂ ಹೊರತು ಬೇರೆ ಯಾರೂ ಮುಟ್ಟುವಂತಿಲ್ಲ. ಅವರೇ ಕಳ್ಳತನ ಮಾಡಿದರೆಂದರೆ, ನೆನೆಯಲೂ ಸಾಧ್ಯವಿಲ್ಲದ ಮಾತು. ಹಾಗೆ ನೆನೆದವರ ಕಣ್ಣು ಕಿವಿಗಳು ಸಿಡಿದು ಹೋದಾವು. ಮೂರನೇಯವ ನೊಬ್ಬ ಕಳ್ಳತನ ಮಾಡಿದನೆಂದರೆ ಕಳ್ಳತನ ಹೇಗೆ ನಡೆಯಿತೆಂದು ಊಹಿಸಲಿಕ್ಕೂ ಸಾಧ್ಯವಿಲ್ಲದಿದೆ!

ಜಮೀನ್ದಾರರು ಜನರನ್ನು ದೂಡುತ್ತಾ ವಿಗ್ರಹದ ಮುಂದೆ ಬಂದು ಕೈಗಳನ್ನೆತ್ತಿ ನಮಸ್ಕಾರ ಮಾಡಿ, "ಅಮ್ಮಾ! ಮಹಾಮಾಯಾ! ಇದೆಂತಹ ಅನ್ಯಾಯ ವಮ್ಮಾ? ನಾವೆಲ್ಲಾ ಏನು ಪಾಪ ಮಾಡಿದೆವೆಂದು ಈ ಘೋರ ನಡೆದಿದೆ? ಈ ಕಳ್ಳತನ ಮಾಡಿದವನಾ ರೆಂದು ನೀನೇ ಹೇಳಬೇಕು. ಅವನನ್ನು ತುಂಡು ತುಂಡಾಗಿ ಕತ್ತರಿಸಿ ನಿನಗೇ ಬಲಿಕೊಡಿಸುತ್ತೇನೆ" ಎಂದರು ವೇದನೆಯ ದನಿಯಿಂದ.

ಅದ್ಭುತವೆನಿಸುವಂತೆ ಅಮ್ಮನವರ ವಿಗ್ರಹದಿಂದ ಅಂಬಿಕೆಯವಾಣಿ ಹೊರಟಿತು: "ಭಕ್ತಾಗ್ರಣೀ! ನನ್ನ ಮೇಲಿನ ಭಕ್ತಿಯಿಂದ ನಿನ್ನ ಬುದ್ಧಿ ಮಂಕಾಯಿತೇ?



ನನ್ನ ನಗಗಳನ್ನು ಕದ್ದವನು ನಿಮ್ಮೊಳಗೇ ಇದ್ದಾನೆ. ಅಗಸರ ಗುಡ್ಡಪ್ಪ. ಅವನನ್ನೇನೂ ಮಾಡಿಬಿಡಬೇಡ. ಅವನೊಬ್ಬ ಬಡ ಪಾಮರ. ಕದ್ದುದನ್ನೆಲ್ಲಾ ಕಳ ಕೊಂಡುಬಿಟ್ಟ!"

ಅಂಬಿಕೆಯ ವಾಣಿ ಕೇಳಿ ಎಲ್ಲರೂ ಸ್ತಬ್ಧರಾದರು. ಭಕ್ತಿ ಪಾರವಶ್ಯತೆಯಲ್ಲಿ ಕೆಲವರ ಕಣ್ಣುಗಳು ತುಂಬಿ ಕೊಂಡುವು. ಆಮೇಲೆ ಅಗಸರ ಗುಡ್ಡಪ್ಪನ ಮೇಲೆ ಕೋಪವೇರಿತು. ಅದುವರೆಗೆ ಅವನು ಚಿಕ್ಕಪುಟ್ಟ ಕಳವುಗಳನ್ನು ಮಾಡಿ ಸಿಕ್ಕಿಬಿದ್ದವನೇ. ಅನೇಕರ ಕೈಯಿಂದ ಪೆಟ್ಟು ತಿಂದವನೇ. ಈಸಾರಿ ಇಷ್ಟು ದೊಡ್ಡ ಕಳ್ಳತನ ಮಾಡಿದನೆಂದರೆ?

ಜನರು ಆ ಅಗಸರಗುಡ್ಡಪ್ಪನನ್ನು ಹಿಡಿದು ದರದರನೆ ಎಳೆದುಕೊಂಡು ಬಂದರು. ಅವನು ತನ್ನ ಮೇಲೆ ಬಂದ ಆರೋಪವನ್ನು ಕೇಳಿ, "ನನಗೇನೂ ಗೊತ್ತಿಲ್ಲ ಸ್ವಾಮಿಾ, ನಿಮ್ಮ ದಮ್ಮಯ್ಯಾ" ಎಂದು ಅಳತೊಡಗಿದನು.



ಜಮೀನ್ದಾರರು ಅವನ ಕಿವಿಗಳನ್ನು ಹಿಡಿದು ಅಲುಗಾಡಿಸುತ್ತ, "ಎಲವೋ ಭಂಡನೇ! ಅಮ್ಮನವರು ನಿನ್ನನ್ನೇನೂ ಮಾಡಬೇಡವೆಂದು ಆಜ್ಞಾಪಿಸಿದ್ದಾಳೆ. ಅಂತಹ ದಯಾಮಯಳಾದ ತಾಯಿಯ ಸೊತ್ತನ್ನು ಅಪಹರಿಸಿದೆಯಾ? ಎಲ್ಲಿ ಅಡಗಿಸಿಟ್ಟೆ? ಸತ್ಯ ಹೇಳಿಬಿಡು" ಎಂದರು.

ಎಷ್ಟೇ ಹೇಳಿದರೂ ಗುಡ್ಡಪ್ಪ ತಾನು ಕಳವು ಮಾಡಿದೆನೆಂದು ಒಪ್ಪಲೇ ಇಲ್ಲ. ಕಡೆಗೆ ಜಮೀನ್ದಾರರು ಅವನನ್ನು ಗುಡಿಯೊಳಗೆ ತಳ್ಳಿ, "ನಿಧಾನವಾಗಿ ಆಲೋಚನೆ ಮಾಡು. ಅಂಬಾಮ್ಮನವರಿಗೆ ಆಗ್ರಹ ತರಿಸಿದರೆ ರಕ್ತಕಾರಿ ಸಾಯುವೆ. ಅವಳೇ ನಿನಗೆ ಶಿಕ್ಷೆ ಕೊಡಲಿ!" ಎಂದು ಹೇಳಿ ಗುಡಿಗೆ ಬೀಗ ಹಾಕಿ ಹೋಗಿಬಿಟ್ಟರು. ಎಲ್ಲರೂ ಹೊರಟುಹೋದರು.

ಮರುದಿನ ಜಮೀನ್ದಾರರು ತಾವೇ ಬಂದು ಗುಡಿಯ ಬಾಗಿಲು ತೆರೆದು ನೋಡಿದಾಗ, ಗುಡ್ಡಪ್ಪನು ರಕ್ತದ ಮಡುವಿನಲ್ಲಿ ಸತ್ತು ಬಿದ್ದಿದ್ದನು.

ನಗಗಳ ಪತ್ತೆ ಅವನ ಮೂಲಕ ತಿಳಿಯಬಹುದೆಂದು ಆಶಿಸಿದವರಿಗೆ ಆಶಾಭಂಗವಾಯಿತು.

ಆ ಬಡಪಾಯಿಯ ಶವನನ್ನು ಹೊರಗೆ ಸಾಗಿ ದೇವಾಲಯವನ್ನೆಲ್ಲಾ ಶುಭ್ರವಾಗಿ ತೊಳೆಯಿ ಪುಣ್ಯಾಹವಾಚನ ಮಾಡಿಸಲಾಯಿತು. ಮತ್ತೆ ನಿತ್ಯ ಪೂಜೆಗಳು ಪ್ರಾರಂಭವಾದರೂ, ಆಭರಣವಿಲ್ಲದ ದೇವಿಯನ್ನು ನೋಡುವಾಗ ಜನರ ಹೊಟ್ಟೆ ಉರಿಯುತ್ತಲೇ ಇದ್ದಿತು.

ಇದನ್ನೆಲ್ಲ ಮನಗಂಡ ಜಮೀನ್ದಾರರು ಒಂದು ದಿನ ಎಲ್ಲಾ ಜನರನ್ನೂ ಸಮಾವೇಶಗೊಳಿಸಿ, "ಅಂಬಿಕಾದೇವಿಯ ಭಕ್ತಜನರೇ, ನಡೆದುದೇನೋ ನಡೆದುಹೋಯಿತು. ಹೋದ ನಗಗಳೂ, ಗುಡ್ಡಪ್ಪನ ಪ್ರಾಣವೂ ತಿರುಗಿಬರುವಂತಿಲ್ಲ. ಮಹಾಮಾಯಿ ಅಂಬಿಕಾದೇವಿ ರಾತ್ರಿ ನನ್ನ ಕನಸಿನಲ್ಲಿ ಕಂಡುಬಂದಳು. ತನ್ನ ಬೋಳು ಕೈಗಳನ್ನೂ ಕೊರಳನ್ನೂ ನನಗೆ ತೋರಿಸಿ, 'ನನ್ನನ್ನು ಹೀಗೆಯೇ ಇಡುವೆಯೇನೋ? ಈ ಕಳ್ಳನಾಟದಿಂದ ನಿಮ್ಮ ಭಕ್ತಿ ಇಷ್ಟೇ ಅಂತ ಗೊತ್ತಾಯಿತು! ಇನ್ನೊಂದು ಅವಕಾಶಕೊಟ್ಟು ನೋಡಿ ನಾನು ಈ ಊರುಬಿಟ್ಟು ಹೋಗುತ್ತೇನೆ' ಎಂದಳು. ಹನಿಕೂಡಿ ಹಳ್ಳ ಎಂಬ ಮಾತು ಕೇಳಿದ್ದೀರಷ್ಟೆ? ಏನನ್ನುವಿರಿ?" ಎಂದರು.

ಮತ್ತೆ ಚಂದಾ ಹಾಕಲು ಜನರೆಲ್ಲಾ ಒಪ್ಪಿದರು. ಬೇಗದಲ್ಲೆ ಅಂಬಾ ಅಮ್ಮನವರಿಗೆ ಬೇಕಾದ ನಗಗಳೆಲ್ಲಾ ಬಂದುವು. ಉತ್ಸವಗಳೂ, ಜಾತ್ರೆಗಳೂ ಮೊದಲಿಗಿಂತ ಚೆನ್ನಾಗಿಯೇ ನಡೆಯತೊಡಗಿದುವು.

ಒಂದು ವರ್ಷ ಮುಗಿಯುವುದರೊಳಗೆ ಅಮ್ಮನವರ ನಗಗಳು ಮತ್ತೆ ಮಾಯವಾಗಿ ಹೋದುವು. ಊರಿಗೆ ಊರೇ ಕುದಿದು ತುಳುಕಾಡಿತು. ಗ್ರಾಮಕ್ಕೆ ಏನೋ ಕೆಟ್ಟಕಾಲ ಬಂತೆಂದೂ ಮತ್ತೆ ಯಾರಿಗೋ ಆಯುಷ್ಯ ತುಂಬಿತೆಂದೂ ತಲಾ ಒಂದೊಂದು ಬಗೆಯಾಗಿ ಮಾತಾಡ ತೊಡಗಿದರು.

ರಾವುಬಹಾದ್ದೂರರು ದೇವಿಗೆ ಕೈಗಳನ್ನೆತ್ತಿ ಮುಗಿದು, "ಓ ಅಮ್ಮಾ! ನಿನ್ನ ಆಭರಣಗಳನ್ನು ಮತ್ತೆ ಕಾಪಾಡಲಾರದೆ ಹೋದೆವು. ನಮ್ಮನ್ನೇಕೆ ಹೀಗೆ ಪರೀಕ್ಷೆ ಮಾಡುವಿಯೋ ತಿಳಿಯದು. ಈಸಾರಿ ಈ ದುಷ್ಟಕಾರ್ಯಕ್ಕೆ ಕೈ ಹಾಕಿದ ಪಾಪಾತ್ಮ ನಾರಮ್ಮಾ? ದಯಮಾಡಿ ಹೇಳು!" ಎಂದು ಕೂಗಿ ಬೇಡಿಕೊಂಡರು.

ಅಮ್ಮನವರಿಂದ ಯಾವ ವಾಣಿಯೂ ಹೊರಡ ಲಿಲ್ಲ. ಕೂಡಲೇ ಜಮೀನ್ದಾರರು ಆತ್ಮಹತ್ಯ ಮಾಡಿ ಕೊಳ್ಳಲು ಸಿದ್ಧರಾಗಿ, ಸೊಂಟದಲ್ಲಿದ್ದ ಸಣ್ಣ ಕತ್ತಿಯ ನ್ನೆತ್ತಿ ತಮ್ಮನ್ನು ತಿವಿದುಕೊಳ್ಳಲು ನೋಡಿದರು, ಎಲ್ಲರೂ ಹಾಹಾಕಾರ ಮಾಡುತ್ತಿರಲು, ವಿಗ್ರಹದಿಂದ ಮಾತುಗಳು ಹೊರಟುವು: "ಎಲೋ ಊರಿಗೆ ಬೇಕಾದವನೇ! ತಡೆ ತಡೆ! ನೀನು ಸಾಯಬಾರದು. ಈ ಊರಿನಿಂದ ನಾನೇ ಹೋಗಿಬಿಡೋಣವೆಂದಿದ್ದೆನು. ನಿಮ್ಮೊಳಗೆ ದುಷ್ಟಜನರಿದ್ದಾರೆ. ಈಸಾರಿ ನಗಗಳನ್ನು ಕದ್ದವನು ಅಗಸರ ಸೋಮಪ್ಪ."

ಅವನ ಹೆಸರು ಕೇಳುತ್ತಲೇ ಕೆಲವರು ಅವನ ಮನೆಯ ಕಡೆಗೆ ಓಡಿದರು.

ಜಮೀನ್ದಾರರು ಜನರಕಡೆಗೆ ತಿರುಗಿ, "ಅಗಸರ ಸೋಮಪ್ಪನನ್ನು ನಾವಾರೂ ಶಿಕ್ಷಿಸುವುದು ಬೇಡ. ಈಸಾರಿ ಅವನಿಂದ ನಗಗಳ ಜಾಡು ಕಂಡು ಹಿಡಿಯಲೇ ಬೇಕು. ಮತ್ತೆ ನಗಗಳನ್ನು ಮಾಡಿಸಿ ಹಾಕುವುದು ಸಾಧ್ಯವೇ?" ಎಂದರು.

ಆದರೆ ಜಮೀನ್ದಾರರು ಹೇಳಿದಂತೆ ನಡೆಯಿಸ ಲಾಗಲೇ ಇಲ್ಲ. ಸೋಮಪ್ಪನ ಮನೆಗೆ ಹೋದವರು ಹಿಂದಿರುಗಿ ಬಂದು ದಿಗಿಲಿನಿಂದ, "ಸೋಮಪ್ಪನು ರಾತ್ರಿಯಲ್ಲಿ ಮನೆಯಲ್ಲೇ ಸತ್ತು ಬಿದ್ದಿದ್ದಾನೆ. ಅಲ್ಲಿ ಎಲ್ಲರೂ ಅಳುತ್ತಿದ್ದಾರೆ" ಎಂದರು. ಹೇಗೆ ಸತ್ತ? ಯಾರು ಕೊಂದರು? ಅದನ್ನೇಕೆ ದೇವಿ ಹೇಳುವು ದಿಲ್ಲ? ಇನ್ನೂ ಅವಳ ಪರೀಕ್ಷೆ ಮುಗಿದಿಲ್ಲವೇನೋ?



ಸೋಮಪ್ಪ ಸತ್ತ ಸಂಗತಿ ಕೇಳಿ ರಾವ್‌ಬಹಾ ದ್ದೂರರು ತಲೆಗೆ ಕೈಹೊತ್ತು ಕುಸಿಕುಳಿತರು. ಅವರಿಗೆ ಸ್ಮೃಹೆ ತಪ್ಪಿ ಹಾಗೆಯೇ ನೆಲಕ್ಕೊರಗಿದರು. ಎಷ್ಟು ಶೈತ್ಯೋಪಚಾರ ಮಾಡಿದರೂ ಎಚ್ಚರ ಬರಲಿಲ್ಲ. ಕಡೆಗೆ ಗಾಬರಿಯಾದ ಗ್ರಾಮಸ್ಥರು ಗುಂಪುಗೂಡಿ, ಎಲ್ಲಾಜನರೂ ಮತ್ತೆ ಚಂದಾ ಹಾಕಿಕೊಂಡು ಅಮ್ಮ ನವರಿಗೆ ನಗಗಳನ್ನು ಮಾಡಿಸುವೆವೆಂದು ಹರಕೆ ಹೊತ್ತುಕೊಂಡ ಮೇಲೆಯೇ ಅವರಿಗೆ ಮೆಲ್ಲನೆ ಎಚ್ಚರ ಬಂದಿತು.

ಜನರೆಲ್ಲ ಹೀಗೆ ಹರಕೆ ಹೊತ್ತುಕೊಂಡ ಸಂಗತಿ ಯನ್ನು ಕೇಳಿ ಅವರು ನಿಂದಿಸುತ್ತ, "ನಿಮಗೆಲ್ಲಾ ಬುದ್ಧಿ ಕೆಟ್ಟಿತೆ? ನನ್ನೊಬ್ಬನ ಪ್ರಾಣಕ್ಕಾಗಿ ಜನರೆಲ್ಲರ ಮನೆ ಮಠಗಳನ್ನು ಗುಂಡಾಂತರ ಮಾಡಿಕೊಳ್ಳುವಿ ರೇನು?" ಎಂದರು.

"ಹಾಗೆಂದರೆ ಹೇಗೆ ಸ್ವಾಮಿ! ನೀವು ಕ್ಷೇಮ ವಾಗಿದ್ದರೇನೇ ನಮಗೆ ಮನೆಬಾಗಿಲು ನಿಂತೀತು.



ಎಂದು ಸಮಾಧಾನ ಹೇಳಿದರು ಗ್ರಾಮಸ್ಥರು. ಅಂತೂ ಅಮ್ಮನವರಿಗೆ ಮೂರನೇಸಾರಿ ಬೇಕಾದ ನಗಗಳೆಲ್ಲಾ ಮಾಡಿಸಿ ಹಾಕಲಾಯಿತು. ಈ ನಗಗಳು ಕೂಡಾ ಹೋಗದೆ ಉಳಿಯುತ್ತದೆಂಬ ನಂಬುಗೆ ಯಾರಿಗೂ ಇರಲಿಲ್ಲ.

ಅರ್ಚಕರ ಮಗಳು ವಾಣಿ ಎಂಬವಳು ತುಂಬಾ ಚುರುಕುಬುದ್ಧಿಯುಳ್ಳವಳು. ಅವಳಿಗೆ ಇದರಲ್ಲೇನೋ ಮೋಸವಿದೆಯೆಂದು ಮೊದಲೇ ಅನುಮಾನವಿತ್ತು. ಈ ಕಲಿಕಾಲದಲ್ಲಿ ಅಂಬಿಕೆ ಮಾತಾಡುತ್ತಾಳೆಂಬುದನ್ನು ನಂಬಲು ಅವಳಿಂದಾಗಲಿಲ್ಲ. ನಗಗಳು ಮಾಯವಾದ ಮೇಲೆ ಕಳ್ಳನೆಂದು ಹೆಸರು ಪಡೆದವರು ಸಾಯುವುದು ಕೂಡಾ ಅವಳಿಗೆ ಅನುಮಾನವಾಗಿತ್ತು. ಯಾರೋ ದೇವತೆಯನ್ನು ಮರೆಮಾಡಿಕೊಂಡು ಕಳ್ಳ ನಾಟಕವಾಡುತ್ತಿದ್ದಾರೆ. ವಾಣಿ ಹೀಗೆ ಹೇಳುವುದನ್ನು ಅರ್ಚಕರು ಒಪ್ಪಲಿಲ್ಲ. ಅಮ್ಮನವರ ಮೇಲೆ ಅವರಿಗೆ ಅಪಾರ ವಿಶ್ವಾಸವಿತ್ತು.

ಹೀಗಿರುವಾಗ ಪರೋಪಕಾರಿ ಚಿನ್ನಪ್ಪನು ತನ್ನ ನಾಯಿಯೊಂದಿಗೆ ಆ ಊರಿಗೆ ಬಂದನು. ಊರಿನವರು ಅವನನ್ನು ಕುರಿತು ಈ ಮೊದಲೇ ಕೇಳಿದ್ದರು. ಆದುದರಿಂದ ಎಲ್ಲರೂ ಉತ್ಸಾಹಗೊಂಡು ಅವನಿಗೆ ಆದರದ ಸ್ವಾಗತವಿತ್ತರು.

ಚಿನ್ನಪ್ಪನು ನೇರಾಗಿ ಹೋಗಿ ಅಂಬಿಕೆಯ ದೇವಾಲಯದಲ್ಲಿಯೇ ಮೊಕ್ಕಾಂ ಹೂಡಿದನು. ಆದುದರಿಂದ ವಾಣಿ ಅಲ್ಲಿಗೆ ಬಂದು ಅವನನ್ನು ಮಾತಾಡಿಸಿ, ದೇವಾಲಯದಲ್ಲಿ ನಡೆಯುವ ಕಳವಿನ ಸಂಗತಿಯನ್ನೆಲ್ಲಾ ಹೇಳಿದಳು. ಎಲ್ಲಾ ಹೇಳಿದ ಮೇಲೆ ಅವಳು, "ಈಸಾರಿ ಹೇಗಾದರೂ ಮಾಡಿ ಆ ನಗಗಳು ಕಳವಾಗಿ ಹೋಗದಂತೆ ನೋಡಬೇಕು. ಅದು ಮಾತ್ರವಲ್ಲ, ನಿಜವಾದ ಕಳ್ಳನನ್ನು ಕೂಡಾ ಹಿಡಿಯಬೇಕು. ಇಲ್ಲದಿದ್ದರೆ ಮತ್ತೆ ದೇವರ ಆಭರಣಗಳು ಕಳವಾಗುವುದೂ, ಮತ್ತೊಬ್ಬ ಪಾಪದವನು ಬಲಿಯಾಗುವುದೂ ತಪ್ಪದು. ಏನಾದರೂ ಉಪಾಯ ಹೇಳಯ್ಯ" ಎಂದಳು.

ಎಲ್ಲಾ ಕೇಳಿ ಚಿನ್ನಪ್ಪನು ಸ್ವಲ್ಪ ಹೊತ್ತು ಆಲೋಚನೆ ಮಾಡಿದನು. "ದೇವಾಲಯದ ಬೀಗದ ಕೈ ಯಾರ ಹತ್ತಿರ ಇರುತ್ತದೆ?" ಎಂದು ವಾಣಿಯನ್ನು ಕೇಳಿದನು.

"ನಮ್ಮ ತಂದೆ ಸಾಯಂಕಾಲದ ಪೂಜೆ ದೀಪಾರಾಧನೆಯಾದ ಮೇಲೆ ದೇವಾಲಯದ ಬಾಗಿಲು ಹಾಕಿ ಬೀಗದ ಕೈಯನ್ನು ಜಮೀನ್ದಾರರಿಗೆ ಕೊಟ್ಟು ಬಿಡುತ್ತಾರೆ." ಎಂದಳು ವಾಣಿ.

"ಸರಿ. ಹಗಲಲ್ಲಿ ನಿಮ್ಮಲ್ಲಿ ಬೀಗದ ಕೈ ಇರುತ್ತದಷ್ಟೆ? ಈದಿನ ಸಾಯಂಕಾಲ ನೀನೇ ಹರಕೆ ಪೂಜೆ ಅಂತ ನೆವನ ಹೇಳಿ ದೇವಿಯ ಪೂಜೆ ದೀಪಾರಾಧನೆಗಳನ್ನು ಮಾಡಿ, ಆಭರಣಗಳನ್ನೆಲ್ಲ ನಿನ್ನ ತಂದೆಗೆ ಗೊತ್ತಾಗದಂತೆ ಎಲ್ಲಿಯಾದರೂ ಅಡಗಿಸಿಟ್ಟು ಬಿಡು. ಉಳಿದುದನ್ನೆಲ್ಲ ನಾನೇ ನೋಡುತ್ತೇನೆ" ಎಂದು

ಚಿನ್ನಪ್ಪನು ತಾನು ಯೋಚಿಸಿದ ಉಪಾಯವನ್ನು ವಾಣಿಗೆ ಗುಟ್ಟಾಗಿ ವಿವರಿಸಿ ತಿಳಿಸಿದನು.

ವಾಣಿ ಆದಿನ ತಾನು ಒಂದು ಹರಕೆ ಹೇಳಿಕೊಂಡಿರುವುದಾಗಿಯೂ, ರಾತ್ರಿ ತಾನೇ ದೇವಿಗೆ ದೀಪಾರಾಧನೆ ಮಾಡಿ ಬರುವೆನೆಂದೂ ಹೇಳಿ, ತಂದೆಯ ಕೈಯಿಂದ ಬೀಗದ ಕೈ ತೆಗೆದುಕೊಂಡು ಗುಡಿಯೊಳಗೆ ಹೋದಳು. ಮತ್ತೆ ಸ್ವಲ್ಪ ಹೊತ್ತಿಗೆ ಅವಳು ಓಡುತ್ತಾ ತಂದೆಯಬಳಿಗೆ ಬಂದು, "ಅಯ್ಯಯ್ಯೋ! ಅಪ್ಪಾ! ಹೋಯಿತು! ಅಮ್ಮನವರ ನಗಗಳೆಲ್ಲಾ ಮತ್ತೆ ಮಾಯವಾಗಿವೆ. ಬನ್ನಿ! ನೋಡಿ!" ಎಂದಳು ತೇಕುತ್ತಾ.

ಅರ್ಚಕರು ಗಾಬರಿಯಾಗಿ ಗುಡಿಯೊಳಗೆ ಹೋಗಿ, ನಗಗಳು ಮಾಯವಾಗಿರುವುದನ್ನು ಕಣ್ಣಾರೆ ನೋಡಿ, ರಾವುಬಹಾದ್ದೂರರ ಬಳಿಗೆ ಹೋಗಿ ಆ ಸಮಾಚಾರ ಹೇಳಿದರು. ರಾವುಬಹಾದ್ದೂರರು ಮಹಾದುಃಖದಿಂದ ಎದೆ ಬಡೆದುಕೊಳ್ಳುತ್ತಾ ಗುಡಿಗೆ ಓಡಿ ಬಂದು ನೋಡಿದರು. ದೇವಿಯ ನಗಗಳು ಮಾಯವಾಗಿರುವುದು ನಿಜವೇ!

ಕ್ಷಣಮಾತ್ರದಲ್ಲಿ ನಗಗಳು ಮಾಯವಾದ ಸಂಗತಿ ಬಿರುಗಾಳಿಯಂತೆ ಊರೊಳಗೆ ಹರಡಿತು. ಮತ್ತೆ ಯಾರ ಆಯುಷ್ಯತೀರಿತೋ? ಕಳ್ಳತನ ಮಾಡಿದವನು ಸತ್ತೇಹೋದರೂ, ಇನ್ನೂ ಕಳ್ಳತನವಾಗುತ್ತಲೇ ಇದೆ! ಏನು ಧೈರ್ಯ? ಸಾಕ್ಷಾತ್ ಅಮ್ಮನವರೊಂದಿಗೆ ಹುಡುಗಾಟವೇ! ಇದರ ಸೂತ್ರಧಾರ ಯಾರೋ ತಿಳಿಯದಲ್ಲಾ!

ಆ ರಾತ್ರಿ ಹೇಗೋ ಕಳೆಯಿತು. ಮರುದಿನ ಬೆಳಗ್ಗೆ ಊರವರೆಲ್ಲಾ ದೇವಾಲಯದ ಹತ್ತಿರ ಸೇರಿಕೊಂಡರು. ರಾವುಬಹಾದ್ದೂರರು ಈ ಸಾರಿ ಕದ್ದವನು ಯಾರೆಂದು ದೇವಿಯನ್ನು ಕೇಳಿದರು. ಅಂಬಿಕೆಯ ವಾಣಿ ಹೀಗೆ ಹೊರಟಿತು: "ಇದೇ ಕೊನೇ ಬಾರಿ. ಇನ್ನು ಮೇಲೆ ನಾನು ಮಾತಾಡಲಾರೆ. ನಿಮ್ಮಲ್ಲಿ



ಪರಮದುಷ್ಟರಿದ್ದಾರೆ. ಇನ್ನು ಮೇಲೆ ನಗಗಳನ್ನು ಮಾಡಿಸಲಾರೆನೆಂದು ಮಾತು ಕೊಟ್ಟರೇನೇ ಕಳ್ಳನ ಹೆಸರು ಹೇಳುತ್ತೇನೆ."

"ನಿನ್ನ ಚಿತ್ತದಂತೆಯೇ ಆಗಲಿ ತಾಯೇ" ಎಂದು ಎಲ್ಲರೂ ಘೋಷಣ ಮಾಡಿದರು.

"ಈಸಾರಿ ನನ್ನ ನಗಗಳನ್ನು ಹಚ್ಚಹಗಲೇ ಕಳ್ಳತನ ಮಾಡಿದವನು ಆ ಕಳ್ಳ ಕುಂಬಾರ ಕಾಳಪ್ಪ" ಎಂದಳು ಅಂಬಿಕೆ.

ಕೂಡಲೇ ಕೆಲವರು ಓಡಿಹೋಗಿ ಕುಂಬಾರ ಕಾಳಪ್ಪನನ್ನು ದರದರ ಎಳೆದುಕೊಂಡು ಬಂದರು.

ಆಗ ಅಲ್ಲಿಯೇ ಇದ್ದ ಚಿನ್ನಪ್ಪನು ಜನರನ್ನು ನೋಡಿ, "ತಡೆಯಿರಿ ತಡೆಯಿರಿ. ಈಸಾರಿ ಈ ಜಗದಂಬಿಕೆ ಏಕೋ ಸುಳ್ಳು ಹೇಳಿದ್ದಾಳೆ. ನಿಜ ಸಂಗತಿಯನ್ನು ನಾನು ತೋರಿಸುತ್ತೇನೆ" ಎಂದು ವಿಗ್ರಹದ ಕಡೆಗೆ ತಿರುಗಿ, "ಹೇ! ಜಗದಂಬೇ! ಜಾಗರೂಕತೆಯಿಂದ ಆಲೋಚಿಸಿ ಹೇಳು. ನಗ

ಗಳನ್ನು ಕದ್ದವನು ನಿಜಕ್ಕೂ ಕುಂಬಾರ ಕಾಳಪ್ಪನೇ ಎನ್ನುವಿಯಾ ?'' ಎಂದು ಕೇಳಿದನು.

ವಿಗ್ರಹದಿಂದ ಕೋಪದ ಮಾತುಗಳು ಹೊರಟುವು: ''ಯಾರೋ ನೀನು ನನ್ನನ್ನೇ ಶಂಕಿಸುವವನು ? ಮೊದಲು ಅವನಿಗೆ ತಕ್ಕ ಪ್ರಾಯಶ್ಚಿತ್ತ ಮಾಡಿಬಿಡೀ.''

ದೇವಿಯ ಕೋಪದ ಮಾತು ಕೇಳಿದ ಕೂಡಲೇ ಜನರು ಚಿನ್ನಪ್ಪನ ಕಡೆಗೆ ಹಾರಿದರು. ಆಗ ವಾಣಿ ಅವರಿಗೆ ಅಡ್ಡ ಬಂದು, ''ಸಲ್ಲಿರಿ ! ಈ ಅಮ್ಮನವರು ಹೇಳಿದುದೆಲ್ಲಾ ಹಸಿಹಸೀ ಸುಳ್ಳು. ನಗಗಳೆಲ್ಲಾ ನನ್ನ ಹತ್ತಿರವೇ ಇವೆ. ಅವುಗಳನ್ನು ತೆಗೆದವಳು ನಾನು !'' ಎಂದು ಹೇಳಿ ತನ್ನ ಕೈಯಲ್ಲಿದ್ದ ಮೂಟೆಯನ್ನು ಕೆಳಗಿಟ್ಟಳು.

ಎಲ್ಲರೂ ಅತ್ಯಂತ ಬೆರಗಾದರು. ಅರ್ಚಕರ ಬಾಯಿಯ ಪಸೆಯೇ ಆರಿಹೋಯಿತು. ಅಂಬಿಕಾ ದೇವಿ ಹೀಗೇಕೆ ಸುಳ್ಳು ಹೇಳುತ್ತಾಳೆ ? ಜನರು ಒಬ್ಬರ ಮುಖವನ್ನೊಬ್ಬರು ನೋಡುವುದನ್ನು ನೋಡಿ ಚಿನ್ನಪ್ಪನು, ''ಹೀಗೆ ಸುಳ್ಳು ಹೇಳುವ ದೇವತೆಯನ್ನು ನಾನು ಬಲ್ಲೆ. ಆ ಅಮ್ಮನವರನ್ನು ನಿಮಗೆ ಕೂಡಾ ಪ್ರತ್ಯಕ್ಷ ತೋರಿಸುತ್ತೇನೆ. ಅದಕ್ಕೇನೂ ಕಷ್ಟವಿಲ್ಲ'' ಎಂದು ಹೇಳಿ ಚಿನ್ನಪ್ಪನು ತನ್ನ ನಾಯಿಯನ್ನು ವಿಗ್ರಹದ ಕಡೆಗೆ ಹೋಗುವಂತೆ ಸನ್ನೆ ಮಾಡಿದನು. ನಾಯಿ ತಟಕ್ಕನೆ ಹೋಗಿ ವಿಗ್ರಹದ ಹಿಂದೆ ಇದ್ದ ವ್ಯಕ್ತಿಯನ್ನು ಈಚೆಗೆ ಎಳೆದು ತಂದಿತು. ಅವಳು ರಾವುಬಹಾದ್ದೂರರ ತೋಟದಾಳಿನ ಹೆಂಡತಿಯೇ !

ನಿಜ ಹೇಳದಿದ್ದರೆ ಕೊಂದುಬಿಡುವುದಾಗಿ ಜನರು ಹೆದರಿಸಿದ ಮೇಲೆ, ಪ್ರತಿಸಾರಿಯೂ ದೇವಿಯ ನಗಗಳನ್ನು ಅಪಹರಿಸುವುದು ರಾವ್‌ಬಹಾದ್ದೂರರೇ ಎಂದೂ, ತನ್ನನ್ನು ವಿಗ್ರಹದ ಹಿಂದೆ ಇರಿಸಿ, ಅವರು ಕಲಿಸಿದ ಮಾತುಗಳನ್ನು ಕಲಿಸಿಕೊಟ್ಟ ವಿಧದಲ್ಲಿ ಹೇಳುತ್ತಿದ್ದೆನೆಂದೂ ಹೇಳಿದಳು.

ಇಷ್ಟರೊಳಗೆ ರಾವ್‌ಬಹಾದ್ದೂರರು ಅಲ್ಲಿಂದ ಜಾರಿಬಿಟ್ಟಿದ್ದರು. ಚಿನ್ನಪ್ಪನು ತನ್ನ ಬಳಗದೊಂದಿಗೆ ಅವರ ಮನೆಗೆ ಧಾವಿಸಿದಾಗ, ಅವರು ವಶಪಡಿಸಿಕೊಂಡ ನಗಗಳೊಂದಿಗೆ ಪರಾರಿಯಾಗುವ ಎತ್ತುಗಡೆಯಲ್ಲಿದ್ದರು.

ನಾಯಿಯ ಸಹಾಯದಿಂದ ಚಿನ್ನಪ್ಪನು ಆ ನಗಗಳನ್ನೆಲ್ಲಾ ರಾವುಬಹಾದ್ದೂರರಿಂದ ಕಿತ್ತುಕೊಂಡು, ಅವರನ್ನು ಬರಿಗೈಯಲ್ಲಿ ಊರು ಬಿಟ್ಟುಹೋಗಲು ಹೇಳಿದನು. ಆಮೇಲೆ ಊರವರ ಆದರಾಭಿಮಾನದ ಉಪಚಾರಗಳನ್ನು ಸ್ವೀಕರಿಸಿಕೊಂಡು, ಚಿನ್ನಪ್ಪನು ತನ್ನ ನಾಯಿಯೊಂದಿಗೆ, ಮುಂದಿನ ಪ್ರಯಾಣ ಕೈಕೊಂಡನು.



# ಪಂಥ

ಒಂದು ದೇಶದ ರಾಜನಿಗೆ ಪಂಥವೆಂದರೆ ಬಹಳ ಇಷ್ಟವಾಗಿತ್ತು. ದಿನಾ ಅವನು ಸಭೆಗೆ ಬಂದ ಕೂಡಲೇ ಸಭೆಯಲ್ಲಿ ತನ್ನೊಂದಿಗೆ ಪಂಥ ಕಟ್ಟುವವರಿದ್ದರೆ ಎದ್ದು ನಿಲ್ಲಬೇಕೆಂದು ಹೇಳುವನು.

ಒಂದು ದಿನ ಅವನು ಸಭೆಗೆ ಬಂದು ಹಾಗೆ ಹೇಳಿದ ಕೂಡಲೇ ಒಬ್ಬ ಯುವಕನು, "ಮಹಾರಾಜರೇ, ನಾನೊಂದು ಪಂಥ ಕಟ್ಟುತ್ತೇನೆ. ಅದರಲ್ಲಿ ನೀವು ಸೋತರೂ ನಾನೂ ಸೋತರೂ ನೂರು ಚಿನ್ನದ ನಾಣ್ಯ ಕೊಡಬೇಕು" ಎಂದನು.

ರಾಜನು ಒಪ್ಪಿ, ಏನು ಪಂಥವೆಂದು ಕೇಳಿದನು.

"ನಿಮ್ಮ ಬಲಗೈಯ ಕಿರುಬೆರಳಿನ ಉಂಗುರದ ಬುಡದಲ್ಲಿ ಒಂದು ಹುಟ್ಟುಮಚ್ಚೆಯಿದೆ. ಬೇಕಾದರೆ ಉಂಗುರ ತೆಗೆದು ನೋಡಿರಿ" ಎಂದ ಯುವಕ.

ರಾಜನು ಉಂಗುರ ತೆಗೆದು ನೋಡಿದನು. ಹುಟ್ಟುಮಚ್ಚೆ ಇರಲಿಲ್ಲ. ಯುವಕನು ರಾಜನಿಗೆ ನೂರು ಚಿನ್ನದ ನಾಣ್ಯಗಳನ್ನು ಕೊಟ್ಟು ಹೊರಟುಹೋಗುತ್ತಿರುವಾಗ, ಸಭೆಯಲ್ಲಿ ಏನೋ ಕಲಕಲರವವೆದ್ದಿತು. ಏನೆಂದು ರಾಜನು ವಿಚಾರಿಸಲು, ಸಭೆಯಲ್ಲಿರುವವರು ಒಟ್ಟಾಗಿ ಆ ಯುವಕನೊಂದಿಗೆ ಹತ್ತು ಸಾವಿರ ಚಿನ್ನದ ನಾಣ್ಯಗಳ ಪಂಥ ಕಟ್ಟಿದ್ದಾರಂತೆ. ರಾಜನ ಬಲಗೈಯ ಕಿರುಬೆರಳಿನ ಉಂಗುರವನ್ನು ತೆಗೆಯಿಸುವೆನೆಂದು ಆ ಯುವಕನು ಪಂಥ ಹೇಳಿದ್ದನಂತೆ. ಅದರಲ್ಲಿ ಗೆದ್ದಿದ್ದಾನೆ !





# ಪಾಪದ ಹಣ

ಒಂದು ಊರಿನಲ್ಲಿ ರಂಗಯ್ಯ ಮತ್ತು ವೆಂಕಟ ರಮಣಯ್ಯ ಎಂಬವರು ಸ್ನೇಹಿತರಾಗಿದ್ದರು. ರಂಗಯ್ಯನದು ಸಾಧಾರಣ ಸಂಪಾದನೆಯಾಗಿತ್ತು. ಅವನ ಜಮಾ ಖರ್ಚುಗಳು ಆಗಿಂದಾಗ ಸರಿಯಾಗಿ ಹೋಗುತ್ತಿದ್ದುವು. ಎಷ್ಟು ಪ್ರಯತ್ನಪಟ್ಟರೂ ಉಳಿಸಲು ಸಾಧ್ಯವಾಗುತ್ತಿರಲಿಲ್ಲ. ವೆಂಕಟರಮಣಯ್ಯನಾದರೋ ವ್ಯಾಪಾರದಲ್ಲಿ ಒಳ್ಳೆಯ ಲಾಭಗಳಿಸುತ್ತ, ದೊಡ್ಡ ಮನೆ ಕೂಡಾ ಕಟ್ಟಿಸಿಕೊಂಡನು. ರಂಗಯ್ಯ ಆಗಾಗ ಅವನ ಮನೆಗೆ ಹೋಗಿ ಮಾತುಕತೆ ಯಾಡಿ ಹಿಂದಿರುತ್ತಿದ್ದನು.

ಒಂದು ದಿನ ರಂಗಯ್ಯ ವೆಂಕಟರಮಣಯ್ಯನಲ್ಲಿಗೆ ಹೋದಾಗ, ವೆಂಕಟರಮಣಯ್ಯ ಅವನಿಗೊಂದು ದುರ್ವಾರ್ತೆ ಹೇಳಿದನು. ಅವರಿಬ್ಬರಿಗೂ ಸ್ನೇಹಿತನಾಗಿದ್ದ ಆನಂದಯ್ಯನ ಮನೆಯೂ ಅಂಗಡಿಯೂ ಒಮ್ಮೆಗೇ ಸುಟ್ಟುಹೋಗಿ ಅವನು ಬಿಕಾರಿಯಾದನಂತೆ. "ಅಯ್ಯೊ! ಎಂತಹ ಘೋರ! ಪಾಪ! ನಾವು ಹೋಗಿ ಅವನನ್ನು ನೋಡಿ ಬರುವ, ಬಾ" ಎಂದ ರಂಗಯ್ಯ.

ವೆಂಕಟರಮಣಯ್ಯ ನಕ್ಕು, "ಚೆನ್ನಾಗಿದೆ ನಿನ್ನ ಮಾತು. ಈ ಸ್ಥಿತಿಯಲ್ಲಿ ನಾವು ಹೋದರೆ ಆನಂದಯ್ಯ ನಮ್ಮ ಹತ್ತಿರ ಹಣ ಕೇಳದಿರುವನೇ?" ಎಂದನು. ರಂಗಯ್ಯ ಬೆರಗಾಗಿ, "ಹಣವೆಂಬುದೇ ಬಲು ಕೆಟ್ಟುದು. ಸ್ನೇಹವು ಪವಿತ್ರವಾದುದಪ್ಪ. ಅವೆರಡಕ್ಕೂ ಗಂಟು ಹಾಕುವೆ ಏಕೆ?" ಎಂದ ತುಸು ಆವೇಶದಿಂದ.

"ನಿನ್ನ ಹತ್ತಿರ ಹಣವಿಲ್ಲದ್ದರಿಂದ ಎಷ್ಟು ನೀತಿಯಾದರೂ ಹೇಳುತ್ತೀ. ನಾನು ಬರುವುದಿಲ್ಲ. ಬೇಕಾದರೆ ನೀನು ಹೋಗು" ಎಂದು ವೆಂಕಟರಮಣಯ್ಯ ಖಂಡಿತ ಹೇಳಿಬಿಟ್ಟನು.

ಆಗಲೇ ಕತ್ತಲೆ ಬೀಳುವ ಹೊತ್ತಾಗಿತ್ತು. ಆದರೂ ರಂಗಯ್ಯನಿಗೆ ಮನಸ್ಸು ಕೇಳದ್ದರಿಂದ ಅಡ್ಡ ದಾರಿ ಹಿಡಿದು ಪಟ್ಟಣಕ್ಕೆ ಹೊರಟನು. ಇಡೀ ರಾತ್ರಿ ನಡೆದರೆ ಬೆಳಗಾಗುವಾಗ ಪಟ್ಟಣವನ್ನು ತಲಪಿ ಆನಂದಯ್ಯನನ್ನು ನೋಡಬಹುದು.

ದಾರಿಯಲ್ಲಿ ಅರ್ಧರಾತ್ರಿಯಹೊತ್ತಿಗೆ, ಆಕಾಶದಲ್ಲಿ ಮೋಡಕವಿದು ಗಾಳಿಯೂ ಮಳೆಯೂ ಪ್ರಾರಂಭವಾಯಿತು. ಅದೃಷ್ಟವಶಾತ್ ಅವನಿಗೊಂದು ಸಣ್ಣ ಗ್ರಾಮವು ತಗಲಿತು. ಮಳೆಯಿಂದ ನೆನೆದು ಒದ್ದೆ ಮುದ್ದೆಯಾದ ರಂಗಯ್ಯ ಒಂದು ಮನೆಗೆ ಹೋಗಿ

ಎಂ. ಕೆ. ಈಶ್ವರರಾವ್

ಬಾಗಿಲು ತಟ್ಟಿದನು. ಒಳಗಿನಿಂದ ಪ್ರತ್ಯುತ್ತರ ಬರಲಿಲ್ಲ. ಬಹಳಸಾರಿ ತಟ್ಟಿದ ಮೇಲೆ ಒಬ್ಬಳು ಮುದುಕಿ ಕಿಟಕಿಯಿಂದ ಬಗ್ಗಿ ನೋಡಿ, "ಯಾರವರು ?" ಎಂದು ಕೇಳಿದಳು.

"ನಾನು ಪಟ್ಟಣಕ್ಕೆ ಹೋಗುವವನು. ದಾರಿಯಲ್ಲಿ ಮಳೆ ಹಿಡಿದುಕೊಂಡಿತು. ಪೂರಾ ಒದ್ದೆಯಾಗಿದ್ದೇನೆ. ಬೆಳಗಾಗುವವರೆಗೆ ಸ್ವಲ್ಪ ಸ್ಥಳ ಕೊಟ್ಟಿರಾದರೆ ಒಳ್ಳೆಯದಿತ್ತು. ಬಾಗಿಲು ತೆರೆಯುವಿರಾ ?" ಎಂದ ರಂಗಯ್ಯ.

"ಮಗನೂ ಸೊಸೆಯೂ ಊರಿಗೆ ಹೋಗಿದ್ದಾರೆ. ನಾನೊಬ್ಬಳೇ ಇದ್ದೇನೆ. ಯಾರು ಬಂದರೂ ಬಾಗಿಲು ತೆರೆಯಬೇಡವೆಂದಿದ್ದಾರೆ. ಆದರೆ ಪಾಪ, ನೀನು ಮಳೆಯಲ್ಲಿ ನೆನೆದು ಹೋಗಿದ್ದೇನೆ ಅನ್ನುತ್ತೀ. ಬಾಗಿಲು ತೆರೆಯುತ್ತೇನೆ, ಇರು" ಎಂದಳು ಮುದುಕಿ.

ಆದರೆ ಅವಳು ಬಾಗಿಲು ತೆಗೆಯದೆ, ಒಳಗೆ ಹೋಗುವುದನ್ನು ನೋಡಿ, ರಂಗಯ್ಯನಿಗೆ ಅನುಮಾನವಾಗಿ, ಹಿಂದಿನ ಬದಿಗೆ ಹೋಗಿ ಕಿಟಕಿಯಲ್ಲಿ ಹಣಿಕಿ ನೋಡಿದನು. ಮುದುಕಿ ಪೆಟ್ಟಿಗೆಯಲ್ಲಿದ್ದ ತುಂಬಾ ಹಣವನ್ನು ತೆಗೆದು, ಒಂದು ಚೀಲದೊಳಗೆ ಹಾಕಿ, ಅದರ ಮೇಲೆ ಅಷ್ಟು ಹುಣಿಸೇ ಹಣ್ಣು ಹಾಕಿ ಆ ಚೀಲವನ್ನು ಆಣಿಗೆ ತಗಲಿಸಿಟ್ಟಳು.

ಮತ್ತೆ ಅವಳು ಬಂದು ಬಾಗಿಲು ತೆರೆಯುವುದರೊಳಗೆ ರಂಗಯ್ಯ ಮುಂದಿನ ಬಾಗಿಲಿನಬಳಿಯಲ್ಲೇ ಬಂದುನಿಂತನು. ಮುದುಕಿ ಬಾಗಿಲು ತೆರೆದು, ರಂಗಯ್ಯನಿಗೆ ಒಣ ಬಟ್ಟೆಯನ್ನು ಕೊಟ್ಟು, ಬೀದಿಬದಿಯ ಕೋಣೆಯಲ್ಲಿ ಮಲಗಲು ಹೇಳಿದಳು.

ರಂಗಯ್ಯ ಮಲಗಿದರೂ ಕಣ್ಣಿಗೆ ರೆಪ್ಪೆ ಹತ್ತಲಿಲ್ಲ. ಮುದುಕಿ ನೇತಾಡಿಸಿಟ್ಟಿರುವ ಹಣದಿಂದ ಆನಂದಯ್ಯ ಚಡಸೇರಲು ಸಾಧ್ಯವಿತ್ತು. ಅವನು ಮತ್ತೆ ವ್ಯಾಪಾರವನ್ನು ಪ್ರಾರಂಭಿಸಿ, ಬೇಗದಲ್ಲೇ ಮುದುಕಿಯ ಹಣವನ್ನು ಬಡ್ಡಿಯೊಂದಿಗೆ ಹಿಂದಿರುಗಿಸಬಹುದಲ್ಲ ?



ಮುದುಕಿ ಗಾಢ ನಿದ್ರೆಯಲ್ಲಿರುವಳೆಂದು ಅವಳ ಗೊರಿಕೆಯಿಂದ ಗೊತ್ತಾಗುತ್ತಿತ್ತು. ಹೊರಗೆ ಮಳೆಯೂ ನಿಂತುಹೋಗಿತ್ತು. ರಂಗಯ್ಯ ಮೆಲ್ಲನೆ ಎದ್ದು ಒಳಗೆ ಹೋಗಿ, ಹಣದ ಚೀಲವನ್ನೆತ್ತಿ ತೋಳಿಗೆ ತಗಲಿಸಿಕೊಂಡು ಆಗಲೇ ಪಟ್ಟಣದ ದಾರಿ ಹಿಡಿದು ಹೊರಟುಬಿಟ್ಟನು.

ಬೆಳಗಾಗಿ ಅಷ್ಟುಹೊತ್ತು ಮೇಲೇರಿದ ಮೇಲೆ ರಂಗಯ್ಯ ಆನಂದನ ಮನೆಗೆ ಮುಟ್ಟಿದನು. ಮನೆಯೆಂದರೆ ಮನೆಗೆ ಸಂಬಂಧಿಸಿದ ಸುಟ್ಟ ಕರಿಬೂದಿಗಳ ರಾಶಿಗಳು. ರಂಗಯ್ಯ ಕಣ್ಣೀರು ಸುರಿಸುತ್ತ ಆನಂದನನ್ನು ಸಮಾಧಾನ ಪಡಿಸಲು ಪ್ರಯತ್ನಿಸಿದನು. ಹಾಗೆಯೇ ಚೀಲದಲ್ಲಿದ್ದ ಹಣವನ್ನು ಆನಂದನ ಮುಂದೆ ಸುರಿದು, "ಇದರಿಂದ ವ್ಯಾಪಾರ ಮಾಡಿ ಮತ್ತೆ ಮುಂದಕ್ಕೆ ಬಾರಯ್ಯ" ಎಂದನು.

"ಈ ಹಣ ನಿನ್ನದಂತೂ ಅಲ್ಲ. ನನ್ನನ್ನು ನೋಡಲಿಕ್ಕೇ ಬಾರದಿರುವ ವೆಂಕಟರಮಣಯ್ಯ ಕೊಟ್ಟು

ಕಳಿಸಿರಲಿಕ್ಕೂ ಇಲ್ಲ. ನಿಜ ಹೇಳು, ಈ ಹಣ ನಿನಗೆ ಎಲ್ಲಿಂದ ? " ಎಂದು ಆನಂದಯ್ಯ ಕೇಳಿದನು.

ರಂಗಯ್ಯ ನಡೆದ ಎಲ್ಲಾ ಸಂಗತಿಯನ್ನೂ ಮುಚ್ಚು ಮರೆಯಿಲ್ಲದೆ ಹೇಳಿ, "ಇದರಲ್ಲಿ ಅಂತಹ ದೊಡ್ಡ ಅನ್ಯಾಯವೇನಿಲ್ಲ. ಆರು ತಿಂಗಳಲ್ಲಿ ಆ ಮುದುಕಿಗೆ ಇದರ ಎರಡು ಪಾಲು ಹಣ ತಿರುಗಿಕೊಟ್ಟರಾಯಿತು. ಸಂದೇಹ ಪಡಬೇಡ, ತೆಗೆದುಕೋ " ಎಂದನು.

ಆನಂದಯ್ಯ ಕಣ್ಣೀರು ತುಂಬಿಕೊಂಡು, "ರಂಗಯ್ಯಾ, ನನ್ನ ಮೇಲೆ ನಿನಗಿರುವ ಅಭಿಮಾನ ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಆದರೆ ಮಿತ್ರಾ, ಸಿಟ್ಟಾಗಬೇಡ. ಈ ಹಣ ನನಗೆ ಬೇಡ. ನಾನು ಇಷ್ಟುದಿನ ಬಹಳ ಅನ್ಯಾಯಗಳನ್ನು ಮಾಡಿ ಹಣ ಸಂಪಾದಿಸಿದ್ದೇನೆ. ನನ್ನ ವ್ಯಾಪಾರವೆಲ್ಲವೂ ಮೋಸದ ವ್ಯಾಪಾರವೇ. ಆದ್ದರಿಂದಲೇ ಇದ್ದದ್ದೆಲ್ಲಾ ಹೋಯಿತು. ಈಗ ನಾನು ಇನೊಬ್ಬ ದೊಡ್ಡ ವ್ಯಾಪಾರಿಯ ಹತ್ತಿರ ಕೆಲಸಕ್ಕೆ ಕುದುರಿದ್ದೇನೆ. ನನ್ನ ಸಂಪಾದನೆಯಿಂದ ಹೇಗೂ ಸಂಸಾರ ಸಾಗುತ್ತದೆ. ಹಣದ ವಿಷಯದಲ್ಲಿ ತುಂಬಾ ಎಚ್ಚರಬೇಕು. ಅದೇ ಪಾಪಗಳಿಗೆ ಮೂಲ. ಇಲ್ಲದಿದ್ದರೆ ನಿನ್ನಂತಹ ಸಜ್ಜನನಿಗೆ ಕಳ್ಳತನದ ಪ್ರೇರಣೆ ಬರುತ್ತಿತ್ತೆ ? ನನ್ನ ಪಾಪದಿಂದಲೇ ನಿನಗೆ ಅಂಥ ಪ್ರೇರಣೆ ಬಂದಿದೆ. ಈ ಹಣವನ್ನು ಆ ಮುದುಕಿಗೇ ಹಿಂದೆ ಕೊಡು." ಎಂದನು.

ರಂಗಯ್ಯ ತನ್ನ ಸ್ನೇಹಿತನ ಪರಿಸ್ಥಿತಿ ಅಷ್ಟೇನೂ ಕೆಟ್ಟಿಲ್ಲವೆಂದು ತೃಪ್ತಿ ಪಟ್ಟು, ಆದಿನ ಮಧ್ಯಾಹ್ನ ಹಣದ ಚೀಲದೊಂದಿಗೆ ತಿರುಗಿ ಪ್ರಯಾಣ ಹೊರಟನು. ಅವನು ಮುದುಕಿಯ ಮನೆಯ ಹತ್ತಿರ ಬರುವಾಗ, ಆ ಮನೆಯ ಮುಂದೆ ಅನೇಕ ಮಂದಿ ಗುಂಪುಗೂಡಿದ್ದರು. ಮುದುಕಿ ಜಗಲಿಯ ಮೇಲೆ ಕುಳಿತುಕೊಂಡು ಅಳುತ್ತಿದ್ದಳು.

ಅವಳ ಸೊಸೆ ಕೋಪದಿಂದ, "ಎಲ್ಲಾ ಸುಳ್ಳು ಮಾತು ! ಹಣವನ್ನೆಲ್ಲಾ ಎಲ್ಲೋ ಅಡಗಿಸಿಟ್ಟು ಯಾವನೋ ಎತ್ತಿಕೊಂಡು ಹೋದನೆಂದರೆ ನಂಬಬೇಕೇ ನಾನು ? ಕಳ್ಳನಿಗೆ ಹುಣಸೇ ಹಣ್ಣಿನ ಚೀಲದಲ್ಲಿ ಹಣ ಇದೇ ಅಂತ ಹೇಗೆ ಗೊತ್ತಾಗುತ್ತೆ ? ಇಂಥವರನ್ನು ಹೇಗೆ ಮನೇಲಿಟ್ಟುಕೊಳ್ಳಲಿ ? ಹೋಗಲಿ ಎತ್ತಾದರೂ !" ಎಂದು ಅರಳು ಹುರಿದಂತೆ ಆವೇಶದಿಂದ ಕೂಗಾಡುತ್ತಿದ್ದಳು.

ಮುದುಕಿಯ ಮಗ ನಿಸ್ಸಹಾಯಕನಾಗಿ ತಲೆ ತಗ್ಗಿಸಿ ನಿಂತಿದ್ದ. ಮುದುಕಿಯ ದುಸ್ಥಿತಿಯನ್ನು ನೋಡಿ ರಂಗಯ್ಯನ ಎದೆ ಕರಗಿ ನೀರಾಯಿತು. ಅವನು ಹಣದ ಚೀಲವನ್ನು ಅವಳಿಗೆ ಕೊಟ್ಟು, ನಡೆದುದನ್ನೆಲ್ಲ ಹೇಳಿದ ಮೇಲೆಯೇ, ಸೊಸೆ ಮುದುಕಿಯನ್ನು ಒಳಗೆ ಕರೆದುಕೊಂಡು ಹೋದಳು. "ಎಂಥ ಪಾಪದ ಹಣವಪ್ಪ !" ಎಂದುಕೊಂಡ ರಂಗಯ್ಯ.



# ಅ ಸೂ ಯೆ

ಕೃಷ್ಣಪುರದಲ್ಲಿ ಇಬ್ಬರು ಪಂಡಿತರು ಗುರುಕುಲ ನಡೆಯಿಸಿಕೊಂಡಿದ್ದರು. ಅವರಲ್ಲಿ ಪ್ರವರನೆಂಬವನು ತನ್ನ ಶಿಷ್ಯರಿಗೆ ತುಂಬ ಶ್ರದ್ಧೆಯಿಂದ, ವಾತ್ಸಲ್ಯದಿಂದ ವಿದ್ಯಾಭ್ಯಾಸ ಮಾಡಿಸಿ, ಸಾಧ್ಯವಾದಷ್ಟು ಬೇಗದಲ್ಲಿ ವಿದ್ಯೆಗಳನ್ನು ಮುಗಿಸಿ ಕಳುಹಿಸಿಬಿಡುವನು.

ವಿದುರನೆಂಬ ಎರಡನೇಯವನು ಶಿಷ್ಯರಿಂದ ನಾನಾ ಚಾಕರಿಗಳನ್ನು ಮಾಡಿಸಿಕೊಳ್ಳುತ್ತ, ವಿದ್ಯೆಗಳನ್ನು ಸರಿಯಾಗಿ ಕಲಿಸುತ್ತಿದ್ದಿಲ್ಲ. ಅವನಲ್ಲಿ ಕಲಿಯುವವರ ವಿದ್ಯೆ ಪೂರ್ತಿಯಾಗುವುದೇ ಇಲ್ಲ. ಆದುದರಿಂದ ಅವನ ಬಳಿಗೆ ಶಿಷ್ಯರು ಬರುವುದೂ ಕಡಿಮೆ.

ವಿದುರನು ಪ್ರವರನ ಮೇಲೆ ಅಸೂಯೆಗೊಂಡು, ರಾಜನ ಬಳಿಗೆ ಹೋಗಿ, ಪ್ರವರನು ಶಿಷ್ಯರ ಕೈಯಿಂದ ಹಣ ಪಡೆದುಕೊಂಡು, ಅವರ ವಿದ್ಯೆ ಪೂರ್ತಿಯಾಗುವುದಕ್ಕೆ ಮೊದಲೇ ಯೋಗ್ಯತಾಪತ್ರ ಕೊಟ್ಟು ಕಳುಹಿಸುತ್ತಾನೆಂದು ಫಿರ್ಯಾದಿ ಮಾಡಿದನು. ರಾಜನು ಇಬ್ಬರನ್ನೂ ವಿಚಾರಣೆಗೆ ಕರೆಯಿಸಿದನು.

ಪ್ರವರನು ತನ್ನ ಮೇಲೆ ಬಂದ ಆರೋಪಣೆಯ ಪತ್ರವನ್ನು ಓದಿ, ಕುದುರೇ ಗಾಡಿಯಲ್ಲಿ ರಾಜನ ಬಳಿಗೆ ಹೋದನು. ವಿದುರನು ಕೂಡಾ ಬಹಳ ಉತ್ಸಾಹದಿಂದ ಎತ್ತಿನ ಗಾಡಿಯಲ್ಲಿ ಹೊರಟನು.

ಫಿರ್ಯಾದಿಗಿಂತ ಆರೋಪಿಯೇ ಮೊದಲು ಬಂದುದನ್ನು ನೋಡಿ, ರಾಜನು ವಿಚಾರಣೆಯನ್ನು ಮುಂದೂಡಬೇಕೆಂದು ಆಲೋಚಿಸಿದನು.

"ಮಹಾರಾಜರೆ, ವಿದುರಪಂಡಿತರೂ ನಾನೂ ಒಂದೇಸಾರಿ ಹೊರಟೆವು. ಅವರು ಎತ್ತಿನ ಗಾಡಿಯಲ್ಲಿ ಬರುತ್ತಿದ್ದಾರೆ. ನಾನು ಕುದುರೇ ಗಾಡಿಯಲ್ಲಿ ಬಂದೆ. ವಿದ್ಯಾರ್ಥಿಗಳ ಸಂಗತಿ ಕೂಡಾ ಇಷ್ಟೇ. ಚುರುಕುಬುದ್ಧಿಯವರು ಮೊದಲು ಉತ್ತೀರ್ಣರಾಗಿ, ಯೋಗ್ಯತಾಪತ್ರ ಪಡೆಯುತ್ತಾರೆ" ಎಂದನು ಪ್ರವರ.

ರಾಜನಿಗೆ ವಿಷಯವು ಅರ್ಥವಾಯಿತು. ಅವನು ಪ್ರವರನನ್ನು ಆಸ್ಥಾನಗುರುವಾಗಿ ನಿಯಮಿಸಿ, ಅಸೂಯೆ ಪಟ್ಟುದಕ್ಕೆ ವಿದುರನ ಗುರುಕುಲವನ್ನು ರದ್ದು ಪಡಿಸಿದನು.





# ಎರಡು ಗಂಡಗಳು

ಹಿಂದೆ ಎಂಕನೂರು ಎಂಬ ಗ್ರಾಮದಲ್ಲಿ ಭೀಮಪ್ಪನೆಂಬ ಚಿಕ್ಕ ರೈತನಿದ್ದ. ಅವನ ಚಿಕ್ಕತನದಲ್ಲಿಯೇ ತಂದೆ ತೀರಿಹೋದುದರಿಂದ, ತಾಯಿಯ ನೆರಳಿನಲ್ಲಿಯೇ ಬೆಳೆದು ದೊಡ್ಡವನಾದನು. ಅವನ ತಾಯಿ ಮೀನಾಕ್ಷಮ್ಮ ಒಳ್ಳೆಯ ರೀತಿಯಲ್ಲಿ ಮಗನನ್ನು ಬೆಳೆಯಿಸಿ, ಕಮಲೆ ಎಂಬ ಸುಂದರಿಯೂ ಸುಗುಣೆಯೂ ಆದ ಹುಡುಗಿಯನ್ನು ತಂದು ಮದುವೆಯನ್ನೂ ಮಾಡಿದಳು.

ಆ ಮೇಲೆ ಮಾತ್ರ ಮೀನಾಕ್ಷಮ್ಮನ ಗುಣದಲ್ಲಿ ಬದಲಾವಣೆ ಬಂದಿತು. ಅವಳು ಕ್ರಮವಾಗಿ ತನ್ನ ಸೊಸೆಯನ್ನು ಜರೆದಾಡುತ್ತ ನಾನಾ ಹಿಂಸೆಗೆ ಗುರಿಪಡಿಸತೊಡಗಿದಳು. ತಾಯಿಗೆ ಇದಿರಾಡಲು ಹೆದರಿಕೊಂಡು ಭೀಮಪ್ಪ, ತನ್ನ ಹೆಂಡತಿ ಪಡುವ ಬಾಧೆಯನ್ನು ನೋಡಿಯೂ ನೋಡದವನಂತೆ ಸುಮ್ಮನಿದ್ದನು. ಹೆಂಡತಿಗೆ ಸಮಾಧಾನ ಹೇಳುವ ಯೋಗ್ಯತೆಯನ್ನೂ ಕಳೆದುಕೊಂಡನು. ಹೀಗಾದುದರಿಂದ ಆ ಮನೆಯಲ್ಲಿ ಕಮಲೆ ದಿಕ್ಕಿಲ್ಲದವಳಂತಾಗಿಬಿಟ್ಟಳು.

ಇದು ಸಾಲದೇನೋ ಎಂಬಂತೆ ಭೀಮಪ್ಪನ ತಂಗಿ ಗರ್ಭಿಣಿಯಾಗಿ ಚೊಚ್ಚಲು ಪ್ರಸವಕ್ಕೆ ತೌರುಮನೆಗೆ ಬಂದು ಸೇರಿದಳು. ತಾಯಿಯೊಂದಿಗೆ ಕೂಡಿ ಅವಳೂ ಕಮಲೆಯನ್ನು ಕಾಡತೊಡಗಿದಳು. ನಿಂತದ್ದಕ್ಕೂ, ಕುಂತದ್ದಕ್ಕೂ ತಪ್ಪುಗಾರಳಾದಳು ಕಮಲೆ.

ಹೀಗಿರುವಾಗ ತಂಗಿಯನ್ನು ನೋಡಿಹೋಗಲು ಕಮಲೆಯ ಅಣ್ಣ ಅಲ್ಲಿಗೆ ಬಂದನು. ಅವಳೇನೂ ಹೇಳದೆಯೇ ಅಲ್ಲಿಯ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡನು. ಅವನು ತುಂಬಾ ಸಂಕಟಗೊಂಡು, ತಂಗಿಯ ಸಂಸಾರವನ್ನು ಸರಿಮಾಡಬೇಕೆಂಬ ಉದ್ದೇಶದಿಂದ, ಅವಳನ್ನು ಗುಟ್ಟಾಗಿ ಮಾತಾಡಿಸಿ ಎಲ್ಲಾ ವಿವರಗಳನ್ನೂ ತಿಳಿದನು. ಆ ಮೇಲೆ ಏನೋ ಒಂದು ಉಪಾಯವನ್ನು ಹೇಳಿ ಹೊರಟುಹೋದನು.

ಆ ಮೇಲೆ ಎರಡು ದಿನಗಳಲ್ಲಿ ಒಬ್ಬ ಜೋಯಿಸನು ತನ್ನ ಸಂಚಿ ಸರಂಜಾಮುಗಳೊಂದಿಗೆ ಮೀನಾಕ್ಷಮ್ಮನ ಮನೆಗೆ ಬಂದನು. ಮೀನಾಕ್ಷಮ್ಮನಿಗೆ ಜ್ಯೋತಿಷ್ಯದ ಹುಚ್ಚು ತುಂಬಾ ಇತ್ತು. ಅಂತೆಯೇ ಅವಳು ಜೋಯಿಸನನ್ನು ಒಳಗೆ ಕರೆದು ಉಪಚರಿಸಿ, ತನ್ನ ಹಸ್ತವನ್ನು ನೋಡಿ ಹೇಳಬೇಕೆಂದಳು.

ಜೋಯಿಸನು ಅವಳ ಹಸ್ತರೇಖೆಗಳನ್ನು ಬಹಳ ಹೊತ್ತು ನೋಡಿ, ಮುಖಬಾಡಿಸಿಕೊಂಡು ಹಿಂದೆ

ಬಿ. ಅಚ್ಯುತರಾವು

ಮುಂದೆ ನೋಡಿದನು. ಕಡೆಗೆ ಏನೂ ಹೇಳದೆ ಎದ್ದು ಹೊರಟುಹೋಗುವ ಪ್ರಯತ್ನ ಮಾಡಿದನು.

"ಯಾಕಪ್ಪಾ, ಏನೂ ಹೇಳದೆ ಹೋಗುವೆಯಲ್ಲಾ? ನೀನು ಕೇಳುವ ದಕ್ಷಿಣೆ ಕೊಡುತ್ತೇನಪ್ಪಾ" ಎಂದು ಮೀನಾಕ್ಷಮ್ಮ ಅವನನ್ನು ತಡೆದಳು.

"ಅದಕ್ಕಲ್ಲಮ್ಮಾ, ಕ್ಷಮಿಸಿರಿ. ನಿಜವನ್ನು ಹೇಳಿ ನಿಮ್ಮನ್ನು ಸಂಕಟಪಡಿಸಲು ಬಾಯಿಬಾರದೆ ಹೋಯಿತು." ಎಂದನು ಜೋಯಿಸ.

"ಪರವಾಗಿಲ್ಲ, ಹೇಳು ಹೇಳು. ಇರುವ ಮಾತು ಹೇಳಲಿಕ್ಕೆ ಸಂಕೋಚಪಟ್ಟರೆ ಹೇಗೆ?" ಎಂದಳು ಮೀನಾಕ್ಷಮ್ಮ.

"ಅಮ್ಮಾ, ನಿಮಗೆ ಎರಡು ಗಂಡಗಳಿವೆ. ಮೊದಲನೆಯದು ತಪ್ಪಿದರೂ ಎರಡನೆಯದು ತಪ್ಪುವುದು ಕಷ್ಟ." ಎಂದು ಜೋಯಿಸನು, ಮತ್ತೇನೂ ಹೇಳದೆ ಬಾಯಿ ಮುಚ್ಚಿಕೊಂಡನು.

"ಗಂಡ" ಎಂಬ ಮಾತಿನಿಂದಲೇ ಮೀನಾಕ್ಷಮ್ಮನ ಗುಂಡಿಗೆ ಕದಡಿತ್ತು. ಆದರೂ ಆ ಗಂಡಗಳು ಎಂತಹದು, ಯಾವುದರಿಂದ ಮುಂತಾದುವನು ಬಿಡಿಸಿ ಹೇಳಬೇಕೆಂದು ಹಟ ಹಿಡಿದಳು.

"ನಿಮ್ಮ ಮಗಳಿಗೆ ಹುಟ್ಟುವ ಮಗುವಿನಿಂದ ನಿಮಗೆ ಗಂಡವಿದೆ. ಹುಟ್ಟಿದ ಶಿಶುವಿಗೆ ಹತ್ತು ವರ್ಷ ಬರುವವರೆಗೂ ನೀವು ಮಗುವನ್ನು ನೋಡದೇ ಹೋದರೆ ಆ ಗಂಡ ತಪ್ಪಿ ಹೋಗುತ್ತದೆ. ಆದರೆ ಒಂದು ತಿಂಗಳಲ್ಲಿ ನಿಮಗೆ ನಾಗನ ಗಂಡವಿದೆ. ನಾಗ ವಶೀಕರಣ ಮಂತ್ರ ತಿಳಿದವರು ನಿಮಗಾಗಿ ಒಂದು ತಿಂಗಳವರೆಗೆ ನಾಗಪೂಜೆ ಮಾಡಿಕೊಂಡಿದ್ದರೆ ನಾಗವು ಶಾಂತವಾಗಿ ಗಂಡ ತಪ್ಪುತ್ತದೆ. ಬೇರೆ ಉಪಾಯವೇನಿಲ್ಲ. ಬರುವ ತಿಂಗಳು ಇದೇ ತಿಥಿಯ ದಿನ ನಿಮಗೆ ನಾಗರ ಹಾವಿನಿಂದ ಗಂಡ" ಎಂದು ಹೇಳಿ ಜೋಯಿಸನು ಹೊರಟುಹೋಗಿಬಿಟ್ಟನು. "ದಕ್ಷಿಣೆ ತೆಗೆದುಕೊಂಡು ಹೋಗಿ ಜೋಸ್ಯರೇ" ಎಂದು ಕಮಲೆ ಹೇಳಿದುದಕ್ಕೆ, "ಕೆಟ್ಟ ಜೋಸ್ಯಕ್ಕೆ ದಕ್ಷಿಣೆ ಯಾಕಮ್ಮಾ?" ಎಂದ ಆ ಜೋಯಿಸ ಹೋಗುತ್ತಾ.



ಮೀನಾಕ್ಷಮ್ಮನಿಗೆ ಪ್ರಾಣಭೀತಿ ದೆವ್ವದ ಹಾಗೆ ಹಿಡಿದುಕೊಂಡಿತು. ಆಕೆಯ ಪರಿಸ್ಥಿತಿ ನೋಡಿ ಕಮಲೆ ಮನ ಕರಗಿದವಳಾಗಿ, "ಅತ್ತೇ, ನೀವೇನೂ ಚಿಂತಿಸಬೇಡಿರಿ. ಅದೃಷ್ಟ ನಿಮ್ಮ ಪಾಲಿಗೆ ಇದೆ. ನನಗೆ ನಾಗ ವಶೀಕರಣ ಮಂತ್ರಗೊತ್ತಿದೆ. ಇವತ್ತಿನಿಂದ ಒಂದು ತಿಂಗಳವರೆಗೆ, ನಾನೇ ವ್ರತ ಹಿಡಿದು ನಿಮ್ಮ ಹೆಸರಿನಲ್ಲಿ ನಾಗ ಪೂಜೆ ಮಾಡುತ್ತೇನೆ. ನಿಮಗೆ ಹಾವಿನ ಗಂಡ ಎಂದಿಗೂ ಬಾರದು. ನಾನು ನೋಡಿಕೊಳ್ಳುತ್ತೇನೆ" ಎಂದಳು.

ಆಕಸ್ಮಿಕವಾಗಿ ತನ್ನ ಸೊಸೆ ದೇವತೆಯಂತೆ ಕಂಡಳು ಮೀನಾಕ್ಷಿಗೆ "ಹಾಗೇನೇ ಅಮ್ಮಾ? ಹಾಗೇ ಮಾಡು. ನಿನಗೆ ನಾಗ ವಶೀಕರಣ ಮಂತ್ರ ಗೊತ್ತಿದೆ ಎಂದು ನನಗೆ ಇದುವರೆಗೂ ಹೇಳಲಿಲ್ಲವಲ್ಲಾ! ನಿನ್ನ ಮಾತು ಕೇಳಿ ಹೋದಪ್ರಾಣ ತಿರಿಗಿಬಂದ ಹಾಗಿದೆ" ಎಂದು ಮೀನಾಕ್ಷಮ್ಮ ಸೊಸೆಯ ಮೇಲೆ ತುಂಬಾ ಅಭಿಮಾನವನ್ನು ಬಯಸಿದಳು.

ಇನ್ನು ಮೊದಲನೇ ಗಂಡದ ವಿಷಯ ನೋಡಬೇಕಾಗಿದೆ. ಮೀನಾಕ್ಷಮ್ಮನ ಮಗಳು ತುಂಬಿದ ಬಸುರಿ. ಆದರೂ ಮೀನಾಕ್ಷಮ್ಮ ನಿರ್ದಾಕ್ಷಿಣ್ಯವಾಗಿ ಮಗಳನ್ನು ಅವಳ ಗಂಡನ ಮನೆಗೇ ಕಳುಹಿಸಿ ಅಲ್ಲೇ ಪ್ರಸವ ಬಾಣಂತನ ನೋಡಿಕೊಳ್ಳಲು ಹೇಳಿಬಿಟ್ಟಳು. ಅದರಿಂದ ಭಯ ಬಹಳ ಮಟ್ಟಿಗೆ ತಗ್ಗಿತು.

ಕಮಲೆ ಒಂದು ತಿಂಗಳವರೆಗೆ ವ್ರತ ಹಿಡಿದು ಅರಸಿನ ಬಣ್ಣದ ಸೀರೆ ಉಟ್ಟುಕೊಂಡು ಅರಸಿನ ಮುದ್ದೆಯ ನಾಗ ವಿಗ್ರಹ ಮಾಡಿ, ಪೂಜೆ ಮಾಡ ತೊಡಗಿದಳು.

ತನ್ನ ಮೇಲೆ ಅವಳಿಗಿರುವ ಶ್ರದ್ಧೆ ನೋಡಿ, ಮೀನಾಕ್ಷಮ್ಮ ತುಂಬಾ ಮೆಚ್ಚಿದಳು. ತಾನು ಹಿಂದೆ ಅವಳನ್ನು ನಾನಾ ಹಿಂಸೆ ಪಡಿಸಿದವಳೆಂಬುದನ್ನು ಕೂಡಾ ಮರೆತಳು.

ಜೋಯಿಸನು ಹೇಳಿದ ದಿನವೂ ಬಂದಿತು. ಆ ದಿನ ಮೀನಾಕ್ಷಮ್ಮ ಜೀವವನ್ನು ಅಂಗೈಯೊಳಗೆ ಹಿಡಿದುಕೊಂಡು, ಮಂಚದ ಮೇಲೆ ಕುಳಿತವಳು ಕಾಲು ನೆಲಕ್ಕಿಡಲಿಲ್ಲ. ಆ ಹೊತ್ತಿಗೆ ಕಮಲೆ ಕೊನೆಯ ಪೂಜೆ ಮಾಡಿ ಅತ್ತೆಗೆ ಆರತಿ ಪ್ರಸಾದ ಕೊಟ್ಟಳು. ಗಂಡ ತಪ್ಪಿ ಹೋಯಿತೆಂದು ಕಮಲೆ ಎಷ್ಟು ಹೇಳಿದರೂ, ಆ ದಿನವಿಡೀ ಕಳೆಯುವವರೆಗೂ ಮೀನಾಕ್ಷಿಯ ಭಯ ತೀರಲಿಲ್ಲ.

ತರುವಾಯ ಮೀನಾಕ್ಷಮ್ಮ ಕಮಲೆಯನ್ನು ಮಗಳಿಗಿಂತ ಹೆಚ್ಚಿನ ರೀತಿಯಲ್ಲಿ ನೋಡತೊಡಗಿದಳು. ತನ್ನ ಅಣ್ಣ ಕಳುಹಿಸಿದ 'ಜೋಯಿಸ'ನ ಪುಣ್ಯದಿಂದ ಕಮಲೆಯ ಸಮಸ್ಯೆ ತೀರಿತು. ಎರಡು ಗಂಡಗಳ ನಾಟಕದಲ್ಲಿ ತನ್ನ ಅಣ್ಣನ ಪಾತ್ರವನ್ನು ಕುರಿತು ಕಮಲೆ ತನ್ನ ಗಂಡನಿಗೆ ಸಹಾ ಹೇಳಲಿಲ್ಲ.



# ಅರ್ಧ – ಅರ್ಧ

ಒಂದು ಏಕಾದಶಿಯ ದಿನ ಒಬ್ಬ ಯಾತ್ರಿಕನು ಒಂದು ಗ್ರಾಮಕ್ಕೆ ಬಂದನು. ಅಲ್ಲಿ ಜಮೀನ್ದಾರರ ಮಾವಿನ ತೋಟ ನೋಡಿದನು. ಮರದಲ್ಲಿ ಪಕ್ವವಾದ ಮಾವಿನ ಹಣ್ಣುಗಳಿದ್ದುವು. ಏಕಾದಶಿ ಫಲಾರಕ್ಕೆ ಈ ಹಣ್ಣುಗಳನ್ನು ಉಪಯೋಗಿಸಬಹುದೆಂದುಕೊಂಡು ಅವನು ಜಮೀನ್ದಾರನ ಬಳಿಗೆ ಹೋಗಿ, ತನ್ನ ಅಭಿಲಾಷೆ ತಿಳಿಸಿದನು.

ಅವನಿಗೆ ಬೇಕಾದಷ್ಟು ಹಣ್ಣುಗಳನ್ನು ಕೊಯ್ದುಕೊಳ್ಳಬಹುದೆಂದು ಜಮೀನ್ದಾರನು ಚೀಟಿ ಬರೆದು ಕೊಟ್ಟನು. ಅದನ್ನು ನೋಡಿ ತೋಟದ ಕಾವಲುಗಾರ, "ನೀವು ಕೊಯುಕೊಂಡ ಹಣ್ಣುಗಳಲ್ಲಿ ಅರ್ಧ ನನಗೆ ಕೊಡಬೇಕು" ಎಂದನು.

"ಹಾಗೇ ಕೊಡುತ್ತೇನೆ. ನಾನು ಕೊಟ್ಟುದರಲ್ಲಿ ಒಂದನ್ನು ನನಗೇ ವಾಪಾಸು ಕೊಡಬೇಕು" ಎಂದ ಯಾತ್ರಿಕ. ಕಾವಲಿಗನೂ ಒಪ್ಪಿದ.

ಯಾತ್ರಿಕನೊಂದಿಗೆ ತೋಟದ ಮಾಲಿ ಕೂಡಾ ಕಾವಲಿಗನಂತೆಯೇ ಕೇಳಲು, ಅವನೊಂದಿಗೂ ಈ ಬಗೆಯ ಒಪ್ಪಂದವನ್ನೇ ಮಾಡಿಕೊಂಡನು. ಆದರೆ ಅವನು ಎರಡೇ ಎರಡು ಹಣ್ಣು ಕೊಯ್ದುಕೊಂಡುದರಿಂದ, ತೋಟ ಮಾಲಿಗಾಗಲಿ, ಕಾವಲಿನವನಿಗಾಗಲಿ ಏನೂ ದಕ್ಕಲಿಲ್ಲ. ಅವರಿಬ್ಬರಿಗೂ ಯಾತ್ರಿಕನು ಒಂದೊಂದು ಹಣ್ಣನ್ನು ಕೊಟ್ಟು ತಿರುಗಿ ಪಡೆದುಕೊಂಡು, ಎರಡನ್ನೂ ತಾನೇ ತಿಂದನು.

—"ಸುನಂದ"



# ಅತಿಥಿ ಮರ್ಯಾದೆ

ಒಂದು ಸಾರಿ ಕೃಷ್ಣಕಾಂತನೆಂಬವನಿಗೆ ಬೇರೆ ಊರಿಗೆ ಹೋಗಬೇಕಾಯಿತು. ಆ ಊರಿನಲ್ಲಿ ಅವನ ದೂರದ ಬಂಧುಗಳಿರುವರಾದರೂ, ಅಲ್ಲಿಗೆ ಹೋದರೆ, ಅವರಿಂದ ಅತಿಥಿ ಮರ್ಯಾದೆ ಪಡೆಯಬೇಕಾಗುತ್ತದೆ. ಅದು ಸುಮ್ಮನೆ ಅವರಿಗೆ ಶ್ರಮಕೊಟ್ಟ ಹಾಗಾಗುವುದರಿಂದ, ಬಾಡಿಗೆಯ ಊಟದಂಗಡಿಯಲ್ಲಿಯೇ ಇದ್ದು ಕೆಲಸ ಮುಗಿಸಿಬಾರೆಂದು ತಂದೆ ಹೇಳಿದರು. ಆದರೆ ಕೃಷ್ಣಕಾಂತನು, ಅಪೂರ್ವವಾಗಿ ಬಂಧುಗಳಿಗೆ ಶ್ರಮ ಕೊಡುವುದರಿಂದ ತಪ್ಪೇನು ಎಂದುಕೊಂಡು ಸೀದಾ ಆ ಬಂಧುಗಳ ಮನೆಗೇ ಹೋದನು.

ಅದು ಚಳಿಕಾಲವಾದುದರಿಂದ ಅವನ ಅಂಗಾಲುಗಳಲ್ಲಿ ಒಡಕುಬಿದ್ದು, ನಡಿಗೆಯಿಂದಾಗಿ ಉರಿಯೆದ್ದಿತ್ತು. ಅದರ ಜತೆಗೆ ಒಂದುಕಡೆಯಲ್ಲಿ ಕಲ್ಲು ದಾರಿಯ ಹೊಂಡವನ್ನು ಧುಮುಕಿದಾಗ ಪಾದದ ಮಣಿಗಂಟು ಉಳುಕಿತ್ತು. ಅವನು ಬಂಧುಗಳ ಮನೆ ಮುಟ್ಟಿದ ಕೂಡಲೇ ಬಾಗಿಲು ತಟ್ಟಿದನು. ಯಜಮಾನನು ಬಾಗಿಲು ತೆರೆದು ಕೃಷ್ಣಕಾಂತನನ್ನು ಅಲ್ಲಿಯೇ ಕುಶಲ ವಿಚಾರಿಸಿ, ಒಳಗಡೆಗೆ ಮುಖ ತಿರುಗಿಸಿ "ಇಲ್ಲಿ ನೋಡೇ? ನಮ್ಮ ಕೃಷ್ಣಕಾಂತ ಬಂದಿದಾನೆ!" ಎಂದು ಕೂಗಿ ಹೇಳಿದನು. ಕೃಷ್ಣಕಾಂತನು ಒಳಗೆ ಕಾಲಿಡಬೇಕೆಂದು ಪ್ರಯತ್ನಿಸಲು ಯಜಮಾನನು ಅಡ್ಡ ನಿಂತಿದ್ದ ಹಾಗೆಯೇ. "ಕೇಳಿಲ್ಲವೇನೇ? ಕೃಷ್ಣಕಾಂತ ಬಂದ. ನಮ್ಮ ಹುಡುಗನ್ನ ಕರೀ" ಎಂದು ಪುನಃ ಕೂಗಿದ. ಕೃಷ್ಣಕಾಂತನಿಗೆ ಹೊಸ್ತಿಲ ಹತ್ತಿರ ಸುಮ್ಮನೆ ನಿಲ್ಲುವುದು ತುಂಬ ಕಷ್ಟವಾಗಿತ್ತು. ಆದರೆ ಯಜಮಾನ ಬಾಗಿಲಲ್ಲೇ ನಿಂತು ಅದೂ ಇದೂ ಮಾತಾಡುತ್ತಲೇ ಇದ್ದಾನೆ. ಇವನು ತನ್ನನ್ನು ಒಳಗೆ ಕರೆಯಲಾರನೆಂದುಕೊಂಡು ಕೃಷ್ಣಕಾಂತನು ಜಗಲಿಯ ಬದಿಯಲ್ಲಿ ಕುಳಿತುಕೊಳ್ಳಲು ಪ್ರಯತ್ನಿಸಲು, "ಒಂದು ನಿಮಿಷ ನಿಲ್ಲಪ್ಪಾ. ಹುಡುಗ ಬರ್ತಾನೆ. ಅಷ್ಟರವರೆಗೂ ಕುಳಿತುಕೊಳ್ಳ ಬೇಡ" ಎಂದು ತಡೆದನು.

ಹುಡುಗ ಸ್ವಲ್ಪಹೊತ್ತಿನ ಮೇಲೆಯೇ ಓಡೋಡಿ ಬಂದ. ಎಲ್ಲಿಗೋ ಆಡಲಿಕ್ಕೆ ಹೋದನಂತೆ. ಅವನು ಬಂದು ತಂಬಿಗೆಯಲ್ಲಿ ನೀರು ತಂದು ಸಿದ್ಧನಾಗಿ ನಿಂತ. ನಿಜ ಸಂಗತಿ ಏನೆಂಬುದನ್ನು ಮನೆಯವನು ಕೃಷ್ಣಕಾಂತನಿಗೆ ಹೀಗೆ ಹೇಳಿದ: "ನೀನೀಗ ನಮ್ಮ ಅಪೂರ್ವ ಅತಿಥಿ. ಅತಿಥಿಯಾಗಿ ಬಂದವನು ದೇವರಿಗೆ ಸಮಾನ.

"ವಸುಂಧರ"

ಆದುದರಿಂದ ಅತಿಥಿಯನ್ನು ದೇವರಂತೆ ಗೌರವಿಸಬೇಕಾದುದು ನಮ್ಮ ಸಾಂಪ್ರದಾಯ. ಅತಿಥಿಗೆ ಮನೆಯಲ್ಲಿ ಯಾರೋ ಒಬ್ಬರು ಕಾಲು ತೊಳೆಯಬೇಕು. ನೀನೇನೋ ವಯಸ್ಸಿನಲ್ಲಿ ಚಿಕ್ಕವನಾಗಿರುವೆ. ಕನ್ಯಾದಾನ ಸಮಯದಲ್ಲಿ ಹೊರತು ಚಿಕ್ಕವರ ಕಾಲನ್ನು ದೊಡ್ಡವರು ತೊಳೆಯ ಕೂಡದು. ಹಾಗೆ ಮಾಡಿದರೆ ಆಯುಷ್ಯ ಕ್ಷೀಣಿಸುತ್ತದೆ. ವಯಸ್ಸಿಗೆ ಬಂದ ಹೆಣ್ಣುಮಕ್ಕಳು ಕೂಡಾ ಪರಪುರುಷನ ಕಾಲನ್ನು ತೊಳೆಯಬಾರದು. ಆದ್ದರಿಂದಲೇ ಚಿಕ್ಕವನು ಬರುವವರೆಗೆ ತಡೆಯಬೇಕಾಯಿತು. ಅವನನ್ನು ಹುಡುಕುವುದಕ್ಕೆ ತಡವಾಯಿತು. ಅಷ್ಟೇ ಹೊರತು ವ್ಯತ್ಯಾಸವಾಗಿ ತಿಳಿಯಬೇಡಪ್ಪ."

"ಓಹೋ ! ತಿಳಿಯಿತು. ಆದರೆ ನನ್ನ ಅಂಗಾಲು ಒಡೆದಿದೆ. ತಣ್ಣೀರು ತಗಲಿದರೆ ಇನ್ನಷ್ಟು ಉರಿಯುತ್ತದೆ" ಎಂದು ಹೇಳಿ ಕೃಷ್ಣಕಾಂತ ಹಿಂಜರಿದ.

"ಅದೇನೂ ದೊಡ್ಡ ವಿಷಯವಲ್ಲ ಬಿಡೂ. ತುಂಬಾ ದೂರ ನಡೆದು ಬಂದವರು ತಣ್ಣೀರಿನಲ್ಲೇ ಕಾಲು ತೊಳೆಯಬೇಕು." ಎಂದ ಮನೆಯವನು. ಹುಡುಗ ಕೃಷ್ಣಕಾಂತನ ಕಾಲುಗಳನ್ನು ತಂಬಿಗೆಯ ತಣ್ಣೀರು ಹೊಯ್ದು ತೊಳೆದ. ತಣ್ಣೀರು ತಗಲಿದ ಕೂಡಲೇ ಒಡಕುಗಳಿಂದ ಭಗ್ಗನೆ ಉರಿಯೆದ್ದಿತು. ಹಲ್ಲು ಕಚ್ಚಿ ಸಹಿಸಿಕೊಂಡ. ಮನೆಯವನು ಕ್ಷೌರಿಕನನ್ನು ಕರೆಯಿಸಿ ಅವನ ಕಾಲುಗಳಿಗೆ ಎಣ್ಣೆಯನ್ನು ಮರ್ದನ ಮಾಡಿಸಿದನು. ಆಗ ಅವನನ್ನು ಒಳ್ಳೆಯ ಆಸನದಲ್ಲಿ ಕೂಡಿಸಿದುದರಿಂದ ಕೃಷ್ಣಕಾಂತನಿಗೆ ತುಂಬ ಹಾಯೆನಿಸುತ್ತ ಉರಿ ತಗ್ಗಿತು.

ಆ ದಿನ ರಾತ್ರಿ ಊಟವಾದ ಮೇಲೆ ಪುರಾಣದ ಶಾಸ್ತ್ರಿಗಳಿಗೆ ಕರೆಹೋಯಿತು. ಅವರು ದೊಡ್ಡ ಪೌರಾಣಿಕರು. ಸುಮಾರು ಅರ್ಧರಾತ್ರಿಯವರೆಗೂ ಪುರಾಣ ಓದಿ ಕಾಲಕ್ಷೇಪ ನಡೆಸಿ, ದಕ್ಷಿಣೆ ಪಡೆದು ಹೊರಟು ಹೋದರು.

"ಅತಿಥಿಯೊಂದಿಗೆ ಕೂಡಿ- ಪುರಾಣ ಕೇಳಿದರೆ ಎಷ್ಟೋ ಪುಣ್ಯವಂತೆ. ಇಂತಹ ಅಪೂರ್ವ ಹೊತ್ತಿನಲ್ಲಿ ಹೊರತು ನಿನಗೂ ನನಗೂ ಪುರಾಣ ಕಾಲಕ್ಷೇಪ





ವಾಗುವುದುಂಟೆ? ಸುಮ್ಮನೆ ಯಾರು ಪುರಾಣ ಕೇಳುತ್ತಾರೆ?" ಎಂದ ಮನೆಯವನು.

ಕೃಷ್ಣಕಾಂತನೇನೋ ಬೇಗನೇ. ಮಲಗಿ ಅಭ್ಯಾಸ ಪಟ್ಟವನು. ಪುರಾಣ ಓದುತ್ತಿದ್ದಾಗ ಅವನು ಬರುವ ನಿದ್ದೆಯನ್ನು ಬಲವಂತವಾಗಿ ಹತ್ತೊತ್ತಿ ಕೊಂಡು ಹೇಗೋ ಎಚ್ಚರದಲ್ಲಿದ್ದನು. ವೇಳೆದಾಟಿ ಮಲಗಿದ ಮೇಲೆ, ಅವನಿಗೆ ನಿದ್ದೆಯೂ ಬರಲಿಲ್ಲ.

ಅವನಿಗೆ ಹೊರಗೋಣೆಯಲ್ಲಿ ಮಲಗಲು ಹಾಸಿಗೆ ಹಾಸಲ್ಪಟ್ಟಿತ್ತು. ಅವನು ಮಂಚದ ಮೇಲೆ ಬಿದ್ದ ಕೂಡಲೇ, ಹುಡುಗನು ಹೊರಗಿನಿಂದ ಸಿಂಹದಂಥ ನಾಯಿಯನ್ನು ತಂದು ಅವನ ಮಂಚದ ಕಾಲಿಗೆ ಕಟ್ಟಿಬಿಟ್ಟಿದ್ದನು.

"ಇದೇನು ನಾಯಿ?" ಎಂದು ಕೃಷ್ಣಕಾಂತನು ಆಶ್ಚರ್ಯದಿಂದ ಕೇಳಿದ. "ಊರೊಳಗೆ ತುಂಬಾ ಕಳ್ಳರಭಯವಪ್ಪಾ. ಕಳ್ಳರು ಗುಂಪಾಗಿ ಬಂದು ಮನೆಯವರನ್ನು ಕೊಂದು ಹಾಕಿ ಹೋಗುವುದೂ ಇದೆ. ಅದಕ್ಕಾಗಿ ನಾಯಿಯನ್ನು ಸಾಕುತ್ತೇವೆ. ಇತ್ತೀಚೆಗೆ ಕಳ್ಳರ ಭಯ ಸ್ವಲ್ಪ ತಗ್ಗಿದೆ ಬಿಡೂ. ಆದರೂ ಅತಿಥಿಗೆ ತಕ್ಕ ರಕ್ಷಣೆ ಕೊಡಬೇಕಾದುದು ನಮ್ಮ ವಿಧಿ. ಯಾವ ಕಾಲಕ್ಕೆ ಏನು ಬರುವುದೋ ಯಾರು ಕಂಡರು? ಮೇಲೆ ದೇವರಿದ್ದಾನನ್ನು" ಎಂದ ಅಲ್ಲಿಯೇ ಇದ್ದ ಮನೆಯ ಯಜಮಾನ.

ಕೃಷ್ಣಕಾಂತನಿಗೆ ಸಾಧಾರಣ ನಾಯಿಯನ್ನು ನೋಡಿದರೇನೇ ಭಯವಿತ್ತು. ಇದು ಯಾವುದೋ ಜಾತಿನಾಯಿ. ಸಿಂಹದ ಹಾಗಿದೆ! ಹೊಸ ಮನುಷ್ಯ ನಾದುದರಿಂದ ಕೃಷ್ಣಕಾಂತನನ್ನು ಆಗಾಗ ಹಿಡಿದು ಮೂಸಿ ನೋಡುತ್ತಿದೆ. ಹೀಗಾಗಿ ಬರಲಿದ್ದ ಅಲ್ಪ ಸ್ವಲ್ಪ ನಿದ್ದೆ ಕೂಡಾ ಪೂರ್ತಿಹೋಯಿತು.

ಬೆಳಂಜಾವದಲ್ಲಿ ಸ್ವಲ್ಪ ಮಾತ್ರ ನಿದ್ರೆಯ ಮಂಪರು ಬಂತೋ ಇಲ್ಲವೋ, ಅಷ್ಟರೊಳಗೆ ಮನೆಯವನು ಬಂದು ಅವನನ್ನು ಎಬ್ಬಿಸಿಬಿಟ್ಟ. ಅತಿಥಿ ಎದ್ದರೆ ಹೊರತು ಮನೆಯವರಾರೂ ಯಾವ ಕೆಲಸವನ್ನೂ ಮಾಡಕೂಡದಂತೆ!

ಇಡೀ ರಾತ್ರಿ ನಿದ್ರೆಯಿಲ್ಲದೆ ಹೋದುದರಿಂದಲೂ, ಪ್ರಯಾಣದ ಬಳಲಿಕೆಯಿಂದಲೂ, ಹವೆಯ ಬದ ಲಾವಣೆಯಿಂದಲೂ ಕೃಷ್ಣಕಾಂತನಿಗೆ ಶೀತ ಹಿಡಿದು ಸೀನು ಬರಲಾರಂಭಿಸಿತು.

ಆ ಮನೆಯವನ ತಾಯಿ ಎಪ್ಪತ್ತು ವರ್ಷದ ಮುದುಕಿ. ಕೃಷ್ಣಕಾಂತನು ಸೀನಿದಾಗಲೆಲ್ಲಾ ಅವಳು ಗುಡು ಗುಡು ಬಂದು ಬೆರಳನ್ನು ನೀರಿಗೆ ಅದ್ದಿ ಅವನ ನೆತ್ತಿಗೆ ಕೊಡರುತ್ತ, "ಹರೇ ಕೃಷ್ಣ! ಚಿರಂಜೀವ!" ಎನ್ನತೊಡಗಿದಳು. ಕೃಷ್ಣಕಾಂತನು ಮೇಲಿಂದ ಮೇಲೆ ಸೀನಿದ. ಪ್ರತಿಸಾರಿಗೂ ಆ ಮುದುಕಿ ಹಾಗೇ ಮಾಡಿದುದರಿಂದ ಅವನ ತಲೆ ಪೂರ್ತಿ ಒದ್ದೆ ಯಾಯಿತು.

ಅವನ ಸೀನು ನಿಂತು ಹೋದ ಮೇಲೆ, "ಹೇಗಿದೆಯೋ ಮಗಾ?" ಎಂದಳು ಮುದುಕಿ.

"ತಲೆ ಒರೆಸಿಕೊಳ್ಳಲಿಕ್ಕೆ ಒಂದು ಬಟ್ಟೆ ಬೇಕಿತ್ತು" ಎಂದ ಕೃಷ್ಣಕಾಂತ.

"ತಪ್ಪು, ತಪ್ಪು ಮಗಾ! ಚಿರಂಜೀವೀ ಜಲವನ್ನು ಒರೆಸಿಕೊಂಡು ಬಿಡಬಾರದು. ಆದರಷ್ಟಕೆ ಅದೇ ಆರಿ ಹೋಗುತ್ತದೆ. ಮನೆಯಲ್ಲಿದ್ದವರಿಗೆ ನೀನು ಬಂದರೆ ಹೀಗೆ ಮಾಡದಿದ್ದರೂ ನಡೆಯುತ್ತೆ. ನೀನು ಅತಿಥಿ ಯಪ್ಪಾ. ನಿನ್ನ ಮೇಲೆ ಪ್ರತ್ಯೇಕ ಶ್ರದ್ಧೆ ಇಡಬೇಕು ನಾವು" ಎಂದು ಹೇಳಿ ಮುದುಕಿ ಒಳಗೆಹೋದಳು. ಹೀಗೆ ಅಲ್ಲಿ ಕೃಷ್ಣಕಾಂತನು ನಾಲ್ಕು ದಿನಗಳಿದ್ದನು. ಪುರಾಣ ಶ್ರವಣದಿಂದ, ನಾಯಿಯ ಭಯದಿಂದ, ಅವನಿಗೆ ನಿದ್ದೆಯೇ ಇಲ್ಲದೆಹೋಯಿತು.

ಅವನು ಹೊರಟುಹೋಗುವ ದಿನ ಬಂತು. ಅವನಿಗಾಗಿ ಬೀಳ್ಕೊಡುವ ಪ್ರತ್ಯೇಕ ಪಾನೀಯ ಒಂದನ್ನು ತಯಾರಿಸಿದ್ದರು. ಮನೆಯವನು ಆ ಪಾನೀಯವನ್ನು ಚಿಕ್ಕ ಲೋಟೆಯಲ್ಲಿ ಹಾಕಿ ಅವನಿಗೆ ಕೊಡುತ್ತ, "ತಕೋಪ್ಪ. ಅಮೃತದಂತಹ ಈ ಪಾನೀಯವನ್ನು ಕೇವಲ ಅತಿಥಿಗಳಿಗಾಗಿಯೇ ತಯಾರಿಸುತ್ತೇವೆ. ಏಳು ಲೋಟೆಗಳಷ್ಟು ಮಾಡುತ್ತೇವೆ. ಎಲ್ಲಾ ನೀನೇ ಕುಡಿಯಬೇಕು. ಮನೆಯವರಾರೂ ಕುಡಿಯಬಾರದು. ಇದು ನಮ್ಮ ಸಾಂಪ್ರದಾಯ." ಎಂದನು.

ಕೃಷ್ಣಕಾಂತನು ಆಶ್ಚರ್ಯದಿಂದ, "ಅತಿಥಿಗಳನ್ನು ಕುರಿತು ಇಷ್ಟೊಂದು ಶ್ರದ್ಧೆ ತೆಗೆದುಕೊಳ್ಳುವವರನ್ನು ನಾನು ಇದುವರೆಗೂ ನೋಡಿಲ್ಲ. ನನ್ನನ್ನು ಕುರಿತು ನಿಮಗೆ ತುಂಬಾ ಶ್ರಮವಾಯಿತು. ಖರ್ಚೂ ಆಯಿತು. ನಾನು ನಿಮಗೆ ತುಂಬಾ ಋಣಿಯಾಗಿದ್ದೇನೆ" ಎಂದ ಉಪಚಾರಕ್ಕಾಗಿ.

"ಅದರಲ್ಲೇನಿದೆ ಹುಡುಗಾ? ನಮಗೆ ಅತಿಥಿ ಸತ್ಕಾರ ಯೋಗ ಬರುವುದೇ ಬಹಳ ಅಪೂರ್ವ. ಒಂದು ಸಾರಿ ನಮ್ಮ ಮನೆಗೆ ಬಂದವರು ಮತ್ತೊಂದು ಸಾರಿ ಬರುವುದಿಲ್ಲ. ಈ ನಡುವೆ ಯಾರೂ ಬರಲಿಲ್ಲ. ಅತಿಥಿಗಳು ಬರುವುದಕ್ಕೂ ಪುಣ್ಯಬೇಕು. ಏನೋ ನಮ್ಮ ಪೂರ್ವ ಪುಣ್ಯದಿಂದ ನೀನು ಬಂದೆಯಪ್ಪ" ಎಂದ ಮನೆಯವನು. ಈ ಮಾತು ಕೇಳಿ ಕೃಷ್ಣಕಾಂತನಿಗೆ



ಆಶ್ಚರ್ಯವಾಯಿತು. ಇವರು ಯಾವ ಗೊಡ್ಡು ಶಾಸ್ತ್ರದ ಮೇಲಿನ ನಂಬಿಕೆಯಿಂದಲೋ ಆಪ್ಯಾಯತೆಯಿಂದ ಅತಿಥಿ ಸತ್ಕಾರ ಮಾಡುತ್ತಾರೆ ನಿಜ. ಅಷ್ಟು ಮಾತ್ರಕ್ಕೆ ಅತಿಥಿಗಳು ಬರುವುದಿಲ್ಲವೆಂದರೇನೋ, ಎಂದುಕೊಳ್ಳುತ್ತಾ ಕೃಷ್ಣಕಾಂತನು ಆ ಬೀಳ್ಗೊಡುವ ಪಾನೀಯವನ್ನು ಮೆಲ್ಲಗೆ ರುಚಿನೋಡಿದನು.

ಅವನ ಕೂದಲುಗಳೆಲ್ಲ ಕೊಕ್ಕರಿಸಿದಂತಾಯಿತು. ಅವನು ಮನೆಯವನಕಡೆಗೆ ನೋಡಿ, "ನಿಮಗೆ ನಿಜವಾಗಿ ಅತಿಥಿ ಬರಬೇಕೆಂಬ ಅಭಿಲಾಷೆಯಿದೆ ಎಂದು ನಿಮ್ಮ ಮಾತಿನಿಂದ ಚೆನ್ನಾಗಿ ಅರ್ಥವಾಗುತ್ತದೆ. ಆದರೆ ಒಮ್ಮೆ ಬಂದವರು ಮತ್ತೊಮ್ಮೆ ಏಕೆ ಬರುವುದಿಲ್ಲವೆಂಬುದೂ ಈಗ ನನಗೆ ಅರ್ಥವಾಯಿತು. ನೀವು ಅತಿಥಿಯನ್ನು ಸಾಕ್ಷಾತ್ ದೇವರ ಹಾಗೆ ನೋಡುತ್ತೀರಿ. ದೇವರು ಕಲ್ಲಾದುದರಿಂದ ಏನೇ ಆದರೂ ಮಾತಾಡದೆ ತಾಳಿಕೊಳ್ಳುತ್ತಾನೆ. ಮಾನವ ಮಾತ್ರರಿಗೆ ಅದು ಸಾಧ್ಯವೇ ಹೇಳಿ? ಈಗ ಈ ಪಾನೀಯವೆಲ್ಲಾ ನಾನೊಬ್ಬನೇ ಕುಡಿಯಬೇಕೆಂದು ಹೇಳುವುದು ತುಂಬ ಅನ್ಯಾಯ. ನಿಮ್ಮ ಮನೆಯಲ್ಲಿರುವವರೆಲ್ಲರೂ ನನ್ನೊಂದಿಗೆ ಕುಡಿದರೇನೇ ಅತಿಥಿದೇವರಿಗೆ ಸಂತೋಷವಾಗುತ್ತೆ. ನಿಮ್ಮನ್ನು ಬಿಟ್ಟು ನಾನೊಬ್ಬನೇ ಅಮೃತ ಕುಡಿಯಲಾರೆ. ಅದು ನಿಮಗಲ್ಲದಿದ್ದರೂ ನನಗೆ ಮಹಾ ಪಾಪ" ಎಂದನು.

ಮನೆಯವರಾರೂ ಅದಕ್ಕೆ ಒಪ್ಪಲಿಲ್ಲ. ಅತಿಥಿಯ ಕೊನೆಯ ಕೋರಿಕೆಯನ್ನು ನೆರವೇರಿಸಿ ತೀರಬೇಕೆಂದು ಕೃಷ್ಣಕಾಂತನು ಪಟ್ಟು ಹಿಡಿದನು. ಆ ಮೇಲೆ ಎಲ್ಲರೂ ಸ್ವಲ್ಪ ಸ್ವಲ್ಪ ಆ ಪಾನೀಯವನ್ನು ಕುಡಿದರು. ಎಲ್ಲರ ಮುಖವೂ ಸುಂಟೆಯಂತಾಯಿತು.

ಯಜಮಾನ ಅದರ ರುಚಿ ನೋಡಿದ ಕೂಡಲೇ "ಮೊದಲು ಈ ಪಾನೀಯವನ್ನು ಮೋರಿಗೆ ಚೆಲ್ಲಿರಿ!" ಎಂದನು ಕೋಪದಿಂದ. ಅದರ ರುಚಿ ಮಹಾ ಭಯಂಕರವಾಗಿತ್ತು.

"ಒಂದಲ್ಲ, ಎರಡಲ್ಲ, ಎಳು ಲೋಟ ಈ ಪಾನೀಯ ಕುಡಿದವನು ಇನ್ನೊಮ್ಮೆ ಇಲ್ಲಿಗೆ ಹೇಗೆ ಬರುವನು? ನೀವೇ ಹೇಳಿ!" ಎಂದ ಕೃಷ್ಣಕಾಂತ.

ಮನೆಯವನು ನಾಚಿಕೆಯಿಂದ ತಲೆ ತಗ್ಗಿಸಿಕೊಂಡನು. ತನ್ನ ಹೆಂಡತಿಗೆ ಅತಿಥಿಗಳೆಂದರೆ ಇಷ್ಟವಿಲ್ಲದೆ ಈ ಬಗೆಯ ಪಾನೀಯವನ್ನು ತಯಾರಿಸುತ್ತಾಳೆಂದು ಅವನಿಗೆ ತೋರಿತು.

"ಅತಿಥೀ ಅಂದರೆ ನಿಮ್ಮ ಹಾಗೇ ಮನುಷ್ಯನೆಂದು ನೋಡಿಕೊಂಡರೆ ಯಾವ ತೊಂದರೆಯೂ ಇಲ್ಲ. ಏನೇ ಇರಲಿ. ನಿಮ್ಮ ಆತಿಥ್ಯಕ್ಕೆ ತುಂಬಾ ಕೃತಜ್ಞನಾಗಿರುತ್ತೇನೆ. ಇದೇನೂ ಮರೆಯುವ ವಿಷಯವಲ್ಲ" ಎಂದು ಹೇಳಿ ಕೃಷ್ಣಕಾಂತನು ಅಲ್ಲಿಂದ ಹೊರಟುಹೋದನು.



# ಕಳ್ಳಬುದ್ಧಿ

**ಸು**ಬ್ಬಣ್ಣನು ದೊಡ್ಡಯ್ಯನ ಅಂಗಡಿಗೆ ಹೋಗಿ ತನಗೇನಾದರೂ ಕೆಲಸ ಕೊಡುವಂತೆ ಕೇಳಿದನು.

"ನಿನ್ನನ್ನು ನನ್ನ ಅಂಗಡಿಯಲ್ಲೇ ಇಟ್ಟುಕೊಳ್ಳುತ್ತೇನೆ. ನಾನು ಹೇಳಿದ ಎಲ್ಲಾ ಕೆಲಸ ಮಾಡಬೇಕು" ಎಂದ ದೊಡ್ಡಯ್ಯ.

ಸುಬ್ಬಣ್ಣ ಒಪ್ಪಿದ.

"ಆಗಾಗ ಪಕ್ಕದ ಅಂಗಡಿ ಸಾವುಕಾರ ಬೇರೆ ಊರಿಗೆ ಹೋಗುತ್ತಾರೆ. ಆ ಸಮಯದಲ್ಲಿ ನೀನು ಆ ಅಂಗಡಿಯಲ್ಲಿ ಕೆಲಸ ಮಾಡಬೇಕು. ಆ ಸಮಯದಲ್ಲಿ ನೀನು ನನಗೂ ಲಾಭವಾಗುವಂತೆ ಮಾಡಬೇಕು. ಹೇಗೆಂದರೆ, ಆ ಸಾವುಕಾರನಿಗೆ ಅನುಮಾನ ಬಾರದಂತೆ ಅಲ್ಲಿ ಮಾರಿದ ಹಣದಲ್ಲಿ ಸ್ವಲ್ಪ ನನಗೂ ಕೊಡಬೇಕು. ಒಂದುವೇಳೆ ಸಿಕ್ಕಿಬಿದ್ದರೆ ಆ ತಪ್ಪನ್ನು ನೀನೇ ಹೊರಬೇಕು. ಒಪ್ಪುವಿಯಷ್ಟೆ?" ಎಂದು ಕೇಳಿದ ದೊಡ್ಡಯ್ಯ.

"ಆಗಲಿ" ಎಂದ ಸುಬ್ಬಣ್ಣ.

"ಈ ಕ್ಷಣವೇ ಹೊರಟುಹೋಗು! ಎಂದಿಗೂ ಈ ಕಡೆಗೆ ಬರಬೇಡ, ಓಡು!" ಎಂದ ದೊಡ್ಡಯ್ಯ ಕೋಪದಿಂದ.

"ಏಕೆ?" ಎಂದ ಸುಬ್ಬಣ್ಣ ಬಿಳಿಚಿಕೊಂಡು.

"ನಿನ್ನದು ಕಳ್ಳಬುದ್ಧಿ. ಇಂಥವನನ್ನು ಯಾವ ನಂಬಿಕೆಯಲ್ಲಿ ಇಟ್ಟುಕೊಳ್ಳಲಿ?" ಎಂದ ದೊಡ್ಡಯ್ಯ.





# ದೆವ್ವಗಳ ಮನೆ

ಹಿಂದೆ ರಾಘವರಾಯರೆಂಬ ದೊಡ್ಡ ಜಮೀನ್ದಾರರೊಬ್ಬರಿದ್ದರು. ಅವರಿಗೆ ಗ್ರಾಮದ ಕೊನೆಯ ಭಾಗದಲ್ಲಿ ವಿಶಾಲವಾದ ಖಾಲೀ ಪ್ರದೇಶವಿತ್ತು. ಆ ಪ್ರದೇಶವನ್ನು ರಾಮನೆಂಬವನು ಬಾಡಿಗೆಗೆ ತೆಗೆದು ತಿಂಗಳಿಗೆ ಇಂತಿಷ್ಟು ಕೊಡುವುದಾಗಿ ಹೇಳಿ, ಒಂದು ವರ್ಷದ ವರೆಗೆ ಬಾಡಿಗೆ ಕೊಡಲಾಗದೆ ಹೋದರೆ, ಸ್ಥಳವನ್ನು ಬಿಟ್ಟುಕೊಡುವುದಾಗಿ ರಾಘವರಾಯರೊಂದಿಗೆ ಒಪ್ಪಂದ ಮಾಡಿಕೊಂಡಿದ್ದನು.

ರಾಮನು ಯಾವಾಗಲೂ ಒಬ್ಬಂಟಿಗನಾಗಿಯೇ ಇರುವವನು. ಯಾರೊಂದಿಗೂ ಕೂಡಿಕೊಳ್ಳುವವನಲ್ಲ. ಅವನು ಆ ಖಾಲೀ ಸ್ಥಳದಲ್ಲಿ ಬಿದಿರು ತಡಿಕೆ ಮುಂತಾದುವುಗಳಿಂದ, ಒಳ್ಳೆಯ ಮನೆ ಕಟ್ಟಿ ಮಾಡಿಗೆ ಹೆಂಚು ಹಾಕಿಸಿದ್ದನು.

ನೋಡಲು ಚೆನ್ನಾಗಿಯೂ ಭವ್ಯವಾಗಿಯೂ ಇರುವ ಆ ಮನೆಯಲ್ಲಿ ಅವನು ವಾಸಮಾಡತೊಡಗಿದನು. ಆ ಮನೆ ಇನ್ನಿಷ್ಟು ಸುಂದರವಾಗಿ ಕಾಣುವಂತೆ ಅದರ ಸುತ್ತಲೂ ಹೂವಿನ ಗಿಡಗಳನ್ನು ಬೆಳೆಯಿಸಿ ಸೊಗಸುಗೊಳಿಸಿದ್ದನು. ಕ್ರಮೇಣ ಹಣ್ಣಿನ ಮರಗಳನ್ನೂ ಬೆಳೆಸಿದನು. ಹೀಗೆ ಆ ಮನೆಯೂ, ಅದರ ಸುತ್ತಲಿನ ವಠಾರವೂ ಹೊರಗಿನಿಂದ ನೋಡಲು ಸುಂದರವಾಗಿದ್ದರೂ, ಮನೆಯೊಳಗೆ ಹೋಗಿ ನೋಡುವ ಅವಕಾಶವು ಯಾರಿಗೂ ಇರಲಿಲ್ಲ. ಗಿಡಮರಗಳಿಂದ ಆ ಮನೆ ಪೂರಾ ಮುಚ್ಚಿಹೋಗಿತ್ತು.

ರಾಮನು ಯಾರನ್ನೂ ಕರೆಯುತ್ತಿರಲಿಲ್ಲ. ಕರೆಯದ ಮನೆಗೆ ಯಾರುತಾನೇ ಏಕೆ ಹೋಗುತ್ತಾರೆ? ಅವನು ತನ್ನ ಮನೆಯಲ್ಲಿ ಆಳುಕಾಳುಗಳನ್ನು ಸಹಾ ಇಟ್ಟಿಲ್ಲ. ತನ್ನ ಅಡಿಗೆ ತಾನೇ ಮಾಡಿಕೊಳ್ಳುವನು. ತಿಂಗಳು ತುಂಬಿದ ಮರುಕ್ಷಣವೇ ಜಮೀನ್ದಾರರಿಗೆ ಬಾಡಿಗೆ ಕೊಟ್ಟುಬಿಡುವನು.

ಅವನಿಂದ ಯಾರಿಗೂ ಯಾವ ತಂಟೆ ತಕರಾರುಗಳೂ ಬರಲಿಲ್ಲ. ಅವನೊಬ್ಬ ಹೊಸ ಬಗೆಯ ಯೋಗಿ ಎಂದು ಜನರು ಹೇಳಿಕೊಳ್ಳುತ್ತಿದ್ದರು. ಹೀಗೆ ಎರಡು ವರ್ಷ ಕಳೆದುವು. ಮೊದಮೊದಲು ಗ್ರಾಮಸ್ಥರಿಗೆ ಅವನ ವಿಷಯದಲ್ಲಿದ್ದ ಆಸಕ್ತಿ ಕ್ರಮೇಣ ತಗ್ಗಿಹೋಯಿತು. ಮತ್ತೆ ಅದು ಆಶ್ಚರ್ಯಕ್ಕೆ ತಿರುಗಿತು. ಅವನ ವಿಷಯದಲ್ಲಿ ವಿಚಿತ್ರವಾದೊಂದು ವದಂತಿ ಹರಡಿತು. ರಾಮನು ಒಬ್ಬಂಟಿಗನಾಗಿ ಆ ಮನೆಯಲ್ಲಿರುವುದಿಲ್ಲವೆಂದೂ, ಅವನಿಗೆ ಮನೆಯೊಳಗೆ

ಪಿ. ಸಿ. ಸರ್ಕಾರ್, ಇಂದ್ರಜಾಲಿಕರು



ದೆವ್ವಗಳ ಸಹಾಯವಿದೆಯೆಂದೂ ಜನರು ಹೇಳಿಕೊಳ್ಳತೊಡಗಿದರು. ಕಡೆಗೆ ಅದನ್ನೇ ನಂಬಿದರು. ಆದರಿಂದ ಆ ಮನೆಯನ್ನು ನೋಡುವುದಕ್ಕೂ ಮಾತಾಡುವುದಕ್ಕೂ ಒಂದು ಬಗೆಯ ಭಯ!

ಹೀಗಿರುವಾಗ, ಏನಾಯಿತೋ ಏನೋ, ಒಂದು ತಿಂಗಳಿನ ಕೊನೆಯಲ್ಲಿ ಎಂದಿನಂತೆ ರಾಮನು ಜಮೀನ್ದಾರರ ಮನೆಗೆ ಬಾಡಿಗೆ ಕೊಡಲು ಬರಲಿಲ್ಲ. ಮತ್ತೊಂದು ವಾರ ಕಳೆಯಿತು. ರಾಮನ ಜಾಡು ಕಾಣಲಿಲ್ಲ. ರಾಮನಿಗೆ ಏನಾಯಿತೆಂದು ನೋಡಿ ಬರುವಂತೆ ಜಮೀನ್ದಾರರು ಆಳುಗಳನ್ನು ಅಲ್ಲಿಗೆ ಕಳುಹಿಸಿದರು.

ಇಬ್ಬರು ಆಳಗಳು ರಾಮನ ಮನೆಗೆ ಬಂದು ಅವನನ್ನು ಕರೆದರು. ಪ್ರತ್ಯುತ್ತರ ಬರಲಿಲ್ಲ. ಬಾಗಿಲಿಗೆ ಬೀಗ ಹಾಕಿರಲೂ ಇಲ್ಲ. ದೂಡಿದಾಗ ತೆರೆದುಕೊಂಡಿತು. ಒಳಗೆ ಎಲ್ಲೆಲ್ಲಿರುವ ವಸ್ತುಗಳು ಅಲ್ಲಲ್ಲೇ ಇದ್ದುವು. ಆದರೆ ರಾಮನು ಮಾತ್ರ ಮನೆಯೊಳಗೆ ಎಲ್ಲಿಯೂ ಇರಲಿಲ್ಲ. ದಿನವಿಡೀ ಆ ಮನೆಯಲ್ಲೇ ಇದ್ದು ರಾಮನ ದಾರಿ ನೋಡಿದರು. ರಾಮನು ಬರಲೇ ಇಲ್ಲ. ಸಾಯಂಕಾಲದಲ್ಲಿ ಅವರು ಆ ಮನೆಗೆ ಬೀಗ ಹಾಕಿ ಜಮೀನ್ದಾರರಿಗೆ ಸಂಗತಿ ತಿಳಿಸಿದರು.

ದಿನಗಳೂ, ತಿಂಗಳುಗಳೂ ಕಳೆದುಹೋದವು. ರಾಮನು ಪೂರ್ತಿ ಅದೃಶ್ಯನಾದನು. ಒಪ್ಪಂದದಂತೆ ಜಮೀನ್ದಾರರು ಆ ಮನೆಯನ್ನು ವಶಪಡಿಸಿಕೊಂಡು, ಅದನ್ನು ಏನು ಮಾಡುವುದೆಂದು ಯೋಚಿಸಿದರು.

ಆ ಗ್ರಾಮದ ಕೆಲವಂದಿ ಯುವಕರು ಸೇರಿ "ಯುವ ಸಮಾಜ" ಕಟ್ಟಿ ಮನೆ ಹುಡುಕುತ್ತಿದ್ದರು. ಅವರ ಉಪಯೋಗಕ್ಕೆ ಆ ಮನೆ ಕೊಡಬೇಕೆಂದು ಜಮೀನ್ದಾರರಿಗೆ ತೋರಿತು. ಆದರೆ ಆ ಮನೆ, ದೆವ್ವದ ಮನೆ ಎಂದೂ, ದೆವ್ವಗಳು ರಾಮನನ್ನು ಅಪಹರಿಸಿಕೊಂಡು ಹೋದುವೆಂದೂ ಎಲ್ಲರೂ ಹೇಳುತ್ತಿದ್ದರು. ಆ ಮನೆಯೊಳಗೆ ಕಾಲಿಡಲು ಯಾರಿಗೂ ಸಾಹಸವಿಲ್ಲ. ಕತ್ತಲೆ ಬಿದ್ದಮೇಲೆ ಆ ಮನೆಯೊಳಗೆ ದೆವ್ವಗಳು ಕಂಡುಬಂದುವೆಂದು ಕೂಡಾ ಪುಕಾರುಗಳು ಹುಟ್ಟಿದುವು.

ನಿಜಕ್ಕೂ ನಡೆದ ಸಂಗತಿ ಏನೆಂದರೆ, ರಾಮನ ನಿಜವಾದ ಹೆಸರು ಕಾಲೀಪದ. ಅವನಿಗೆ ನೆರೆಪ್ರಾಂತದಲ್ಲಿದ್ದ ಡಕಾಯಿತರೊಂದಿಗೆ ಸಂಬಂಧವಿದ್ದಿತು. ಆ ಗುಂಪಿನವರು ಒಂದು ದಿನ ರಾತ್ರಿ ಯಾವನೋ ಒಬ್ಬ ಜಮೀನ್ದಾರನ ಮನೆಯನ್ನು ಕೊಳ್ಳೆ ಹೊಡೆದು, ಆ ಧನವನ್ನು ಭದ್ರವಾಗಿ ಅಡಗಿಸಿಡುವಂತೆ ಕಾಲೀಪದನ ಕೈಗೆ ಕೊಟ್ಟಿದ್ದರು. ಅವನು ಆ ಹಣವನ್ನೂ ನಗಗಳನ್ನೂ ತೆಗೆದುಕೊಂಡು ಈ ಪ್ರಾಂತಕ್ಕೆ ಓಡಿ ಬಂದು, ರಾಮನೆಂದು ಹೆಸರು ಬದಲಾಯಿಸಿ, ಯಾರ ಸಂಬಂಧವೂ ಇಟ್ಟುಕೊಳ್ಳದೆ ಒಬ್ಬಂಟಿಗನಾಗಿ ಜೀವಿಸಿಕೊಂಡಿದ್ದನು. ಅವನು ತನ್ನದಾದ ಧನವನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿಟ್ಟು, ತನ್ನ ತಲೆಯ ಕೆಳಗೇ ಇಟ್ಟುಕೊಂಡು ಮಲಗುವನು.



ಕಳ್ಳರು ಸುಮ್ಮನಿರಲಿಲ್ಲ. ಅವರ ನಾಯಕನು ಕಾಲೀಪದನನ್ನು ಶೋಧಿಸಿ, ಅವನ ಇರುವಿಕೆಯನ್ನು ಕಂಡುಹಿಡಿದು, ತನ್ನ ಅನುಚರರ ಸಹಾಯದಿಂದ ಅವನನ್ನೂ, ಧನವಿರುವ ಪೆಟ್ಟಿಗೆಯನ್ನೂ ತಮ್ಮ ರಹಸ್ಯ ಸ್ಥಳಕ್ಕೆ ತೆಗೆದುಕೊಂಡು ಹೋದನು. ಆ ಡಕಾಯಿತರು ಕಾಲೀಪದನನ್ನು ಕಾಳೀದೇವಿಗೆ ಬಲಿ ಕೊಡುವ ತಯಾರಿಯಲ್ಲಿರುವಾಗ, ರಾಜಭಟರು ಅವರ ಮೇಲೆ ದಾಳಿಮಾಡಿ ಎಲ್ಲರನ್ನೂ ಹಿಡಿದು ಕೊಂಡು ಹೋಗಿ ಸೆರೆಮನೆಗೆ ಹಾಕಿದರು.

ಈ ಜಮೀನ್ದಾರರ ಗ್ರಾಮದಲ್ಲಿ ನಗರದಲ್ಲಿ ಉನ್ನತ ವಿದ್ಯೆಯನ್ನು ಕಲಿತ ಮಾನಸನೆಂಬ ವಿದ್ಯಾರ್ಥಿಯೊಬ್ಬನಿನು. ಅವನು ರಜೆಯ ದಿನಗಳಲ್ಲಿ ಮನೆಗೆ ಬಂದು "ಯುವಸಮಾಜ"ದ ವಿಷಯವನ್ನು ತಿಳಿದನು. ಜಮೀನ್ದಾರರು ಖಾಲೀ ಸ್ಥಳದ ಮನೆಯನ್ನು ಯುವ ಸಮಾಜಕ್ಕೆ ಕೊಡುವುದಾಗಿ ಹೇಳಿದರೂ ಯುವಕರು ದೆವ್ವದ ಭಯದಿಂದ ನಿರಾಕರಿಸಿದ ಸಂಗತಿ ಅವನಿಗೆ ತಿಳಿಯಿತು. ವಿಜ್ಞಾನ ಪಾಠವನ್ನು ಅಭ್ಯಸಿದ್ದ ಅವನಿಗೆ ದೆವ್ವಗಳಲ್ಲಿ ನಂಬುಗೆಯಿರಲಿಲ್ಲ. ಆದರೆ ಮೂಢ ನಂಬುಗೆಯ ಊರ ಯುವಕರೂ, ಗ್ರಾಮಸ್ಥರೂ ತನ್ನ ಹೇಳಿಕೆಯನ್ನು ನಂಬುವವರಲ್ಲವೆಂಬುದೂ ಅವನಿಗೆ ಗೊತ್ತಿತ್ತು. ವಾದ ಮಾಡಲು ಹೋದರೆ ಪರಿಸ್ಥಿತಿ ವಿಷಮಕ್ಕೇ ಹೋಗುತ್ತದೆ.

ಅವನು ಸುರಜಿತನೆಂಬ ಊರ ಯುವಕರ ನಾಯಕನನ್ನು ಕಲೆತು, "ಜಮೀನ್ದಾರರೇನೋ ನಮ್ಮ ಮೇಲಿನ ದಯದಿಂದ ಮನೆ ಕೊಡಲು ಒಪ್ಪಿದ್ದಾರೆ. ಆದರೆ ದೆವ್ವಗಳ ಭಯ ಹೋಗಬೇಕು. ಅಲ್ಲವೇ ?" ಎಂದನು.

"ಹೌದು ಹೌದು. ದೆವ್ವಗಳು ಆ ಮನೆಯನ್ನು ಬಿಟ್ಟು ಹೊದರೆ, ಅದು ನಮ್ಮ ಸಮಾಜಕ್ಕೆ ತುಂಬ ಅನುಕೂಲವಾದ ಮನೆ" ಎಂದ ಸುರಜಿತ.

"ನಮ್ಮ ಊರಿನಲ್ಲಿ ಒಳ್ಳೆಯ ಭೂತವೈದ್ಯರಿಲ್ಲವೇನು ?" ಎಂದು ಕೇಳಿದ ಮಾನಸ.

"ಅವರೆಲ್ಲ ಕೈಲಾಗದವರೇ" ಎಂದ ಸುರಜಿತ. "ಹಾಗಾದರೆ ಆ ದೆವ್ವಗಳನ್ನು ಓಡಿಸುವ ದಾರಿ ನಾನು ನೋಡುತ್ತೇನೆ. ಒಂದೆರಡು ದಿನ ಅವಧಿ ಬೇಕು" ಎಂದ ಮಾನಸ.

ಎರಡು ದಿನಗಳ ನಂತರ ಅವನು ನಗರದಿಂದ ಸತ್ಯಾನಂದನೆಂಬ ಭೂತವೈದ್ಯನನ್ನು ಕರೆದುಕೊಂಡು ಬಂದನು. ಆ ವೈದ್ಯನು ಪಟ್ಟವಾದ ತನ್ನ ತಲೆ ಜುಟ್ಟನ್ನು ಕೆದರಿಕೊಂಡು ಕೆಂಪು ಬಟ್ಟೆಗಳನ್ನೂ ಕೆಂಪು ಅಕ್ಷತೆಯನ್ನೂ ಧರಿಸಿದ್ದನು. ಮಾನಸನು ಅವನನ್ನು ತನ್ನ ಸ್ನೇಹಿತರಿಗೆ, ಅವನು ದೊಡ್ಡ ಭೂತವೈದ್ಯನೆಂದೂ, ಮಂತ್ರವಾದಿಯೆಂದೂ, ಪರಿಚಯ ಮಾಡಿಸಿದನು.

ಮೂರನೇ ದಿನ ಶನಿವಾರವಾದುದರಿಂದ ಭೂತೋಚ್ಚಾಟನೆಗೆ ಅದು ಒಳ್ಳೆಯ ದಿನವೆಂದು ನಿರ್ಣಯಿಸಲಾಗಿತ್ತು. ಆ ದಿನ ಸಾಯಂಕಾಲ ಮನೆಯ ಅವರ

ದಲ್ಲಿ ಉಚ್ಚಾಟನೆಯ ಕಾರ್ಯಕ್ಕೆ ಸಿದ್ಧತೆಗಳು ತೊಡಗಿದುವು. ಸುತ್ತಲೂ ರಂಗವಲ್ಲಿ ಬರೆದು, ಹೂಗಳನ್ನು ಚೆಲ್ಲಿ ಧೂಪದ ಹೊಗೆ ಹಾಕಿದರು. ನೋಡಲು ಎಲ್ಲಾ ಜನರೂ ಬಂದರು. ಅಲ್ಲಿ ಸೇರಿದ ಗ್ರಾಮಸ್ಥರೊಂದಿಗೆ ಭೂತ ವೈದ್ಯನು ಹೀಗೆ ಹೇಳಿದನು :

"ಮಹಾಶಯರೆ, ಈ ಮನೆಯೊಳಗೆ ಸೇರಿರುವುದು ಒಂದು ಬ್ರಾಹ್ಮಣ ದೆವ್ವವಾಗಿದೆ. ಉಳಿದ ದೆವ್ವಗಳು ಅದರ ಸೇವಕ ದೆವ್ವಗಳೇ. ನಾಯಕನಿಲ್ಲದಂತೆ ಮಾಡಿದರೆ ಸೇವಕರು ಓಡಿಹೋಗುತ್ತಾರೆ. ನಾನು ಆ ದೆವ್ವನಾಯಕನೊಂದಿಗೆ ಮಾತಾಡಿ ಹೊರಟು ಹೋಗಲು ಒಪ್ಪಿಸಿದ್ದೇನೆ. ಅವನು ಈ ಸೀಸೆಯೊಳಗೆ ಸೇರಲು ಒಪ್ಪಿದ್ದಾನೆ. ಅವನನ್ನು ಸೀಸೆಯೊಳಗೆ ನಿದ್ರಿಸುವಂತೆ ಮಾಡುತ್ತೇನೆ. ಆಮೇಲೆ ಈ ಸೀಸೆಯನ್ನು ನೀರಿನೊಳಗೆ ಹಾಕಿಬಿಟ್ಟರೆ, ಲೋಕಾಂತರದಲ್ಲಿ ಅವನು ಶಾಶ್ವತ ಕೀರ್ತಿ ಅನುಭವಿಸುತ್ತಾನೆ. ಇದಕ್ಕೆ ನೀವೆಲ್ಲಾ ಅನುಮತಿ ಕೊಡಬೇಕು." ಎಂದನು.

"ಹಾಗೇ ಮಾಡಿರಿ ಭೂತವೈದ್ಯರೇ" ಎಂದು ಎಲ್ಲರೂ ಕೂಗಿದರು. ಸತ್ಯಾನಂದನ ಅವತಾರವನ್ನೂ, ಮಾತಿನ ರೀತಿಯನ್ನೂ ನೋಡಿ ಎಲ್ಲರಿಗೂ ಅವನಲ್ಲಿ ವಿಶ್ವಾಸವುಂಟಾಯಿತು.

ಸತ್ಯಾನಂದನ ಮುಂದೆ ನೆಲದ ಮೇಲೆ ಅಗಲ ಬಾಯಿಯ ಸೀಸೆಯೊಂದನ್ನು ನಿಲ್ಲಿಸಿಡಲಾಗಿತ್ತು. ಅದರ ಬದಿಯಲ್ಲಿ ಒಂದು ಬಾಳೇಹಣ್ಣೂ ಇದ್ದಿತು. ಆ ಬಾಳೇಹಣ್ಣಿನ ದಪ್ಪ ಸೀಸೆಯ ಬಾಯಿಗಿಂತ ಒಂದು ಚೂರು ಹೆಚ್ಚಾಗಿತ್ತು.

ಸತ್ಯಾನಂದನು ಏನೋ ವಿಚಿತ್ರವಾದ ಅಕ್ಷರಗಳು ಬರೆಯಲ್ಪಟ್ಟಿದ್ದ ದೊಡ್ಡ ಕಾಗದವೊಂದನ್ನು ತೆಗೆದುಕೊಂಡು, ಅದರ ಮೇಲೆ ಬರೆದಿರುವ ಮಂತ್ರಗಳನ್ನು ಓದಿ, ಆ ಕಾಗದವನ್ನು ಸೀಸೆಯೊಳಗೆ ಹಾಕಿದನು. ಅದರ ಮೇಲೆ ಸ್ವಲ್ಪ ಎಣ್ಣೆಯನ್ನು ಸಿಂಪಡಿಸಿ ಅದಕ್ಕೆ ಬೆಂಕಿ ಹಚ್ಚಿದನು. ಸೀಸೆಯೊಳಗೆ ಆ ಕಾಗದವು ಉರಿಯುತ್ತಿರಲು, ಅವನು ಬಾಳೇ ಹಣ್ಣನ್ನು ತೆಗೆದುಕೊಂಡು ಅದರ ಕೆಳಭಾಗದ ಸಿಪ್ಪೆಯನ್ನು ಸ್ವಲ್ಪ



ಮಾತ್ರ ಸುಲಿದು ಸೀಸೆಯ ಮೂತಿಯ ಮೇಲೆ ಚುಚ್ಚಿದಂತೆ ಹೊಗಿಸಿ ನಿಲಿಸಿಟ್ಟನು.

ಬಾಳೇಹಣ್ಣು ಸೀಸೆಯ ಮೂತಿಯಲ್ಲಿ ನಿಂತುದು ಮಾತ್ರವಲ್ಲದೆ, ಸತ್ಯಾನಂದನು "ಹ್ರಾಂ ಹ್ರೀಂ ಛಟ್ ಫಟ್" ಎಂದು ಭೂತ ಮಂತ್ರ ಹೇಳುತ್ತಿದ್ದಂತೆ, ಕೊಂಚ ಕೊಂಚವಾಗಿ ಸೀಸೆಯೊಳಗೆ ಇಳಿಯತೊಡಗಿತು. ಸೀಸೆ ಬಾಳೇಹಣ್ಣನ್ನು ಮೆಲ್ಲನೆ ನುಂಗುವ ಚಂದ ನೋಡಿ ಎಲ್ಲರೂ ದಿಗ್ಭ್ರಾಂತಿಗೊಳಗಾದರು. ಒಳಗೆ ಅದೃಶ್ಯವಾಗಿರುವ ದೆವ್ವವೇ ಅದನ್ನು ಹಾಗೆ ಸ್ವೀಕರಿಸುತ್ತಿರುವಂತೆ ತೋರಿತು. ಬೇಗದಲ್ಲೇ ಹಣ್ಣು ಸೀಸೆಯೊಳಗೆ ಪೂರ್ತಿ ಹೋಗಿ, ಸಿಪ್ಪೆ ಹೊರಗೆ ಜಾರಿ ಬಿದ್ದಿತು. ನೋಡುವವರು ಆಹಾ ಎಂದು ಬಾಯಿ ತೆರೆದರು.

ಕೂಡಲೇ ಸತ್ಯಾನಂದನು ಸೀಸೆಯ ಬಾಯಿಗೆ ಬಿರಡೆ ಬಿಗಿದು "ದೆವ್ವವು ಈಗ ನನ್ನ ಅಧೀನದಲ್ಲಿದೆ. ಈ ಮನೆಯೊಳಗೆ ಇನ್ನು ಮೇಲೆ ಇದರ ಉಪದ್ರ ಬರುವುದಿಲ್ಲ. ನೀವು ಈ ಮನೆಯನ್ನು ಇಷ್ಟ ಬಂದ ಹಾಗೆ ಉಪಯೋಗಿಸಿಕೊಳ್ಳಬಹುದು." ಎಂದು, ತಾನೇ ಆ ಮನೆಯೊಳಗೆ ಹೋದನು.

ಆ ಮೇಲೆ ಎಲ್ಲರೂ ನಿರ್ಭಯವಾಗಿ ಆ ಮನೆಯೊಳಗೆ ಪ್ರವೇಶಿಸಿದರು. ಭೂತದ ಸೀಸೆಯನ್ನು ಆಳವಾದ ಬಾವಿಯೊಳಗೆ ಹಾಕಲಾಯಿತು. ಆ ದಿನ ಸಾಯಂಕಾಲವೇ ಯುವ ಸಮಾಜದ ಪ್ರಾರಂಭೋತ್ಸವವು ಬಹು ಚೆನ್ನಾಗಿ ನಡೆಯಿತು. ಅದಕ್ಕೆ ಜಮೀನ್ದಾರರೇ ಅಧ್ಯಕ್ಷತೆ ವಹಿಸಿದರು.

ಮಾನಸನು ಸತ್ಯಾನಂದನೊಂದಿಗೆ ಮಾರಣೆ ದಿನವೇ ನಗರಕ್ಕೆ ಹೊರಟುಹೋದನು. ಎಲ್ಲರೂ ಸೇರಿ ಸತ್ಯಾನಂದನಿಗೆ ಬಹುಮಾನ ಕೂಡ ಕೊಟ್ಟರು.

"ಒಳ್ಳೇ ಸತ್ಯಾನಂದನಯ್ಯ! ಆ ದೆವ್ವದ ಕಥೆ ಏನಯ್ಯ? ಬಾಳೇ ಹಣ್ಣು ಸೀಸೆಯೊಳಗೆ ಇಳಿಯುವುದನ್ನು ನೋಡಿ, ನನಗೂ ಆಶ್ಚರ್ಯವಾಯಿತು ಬಿಡು. ಆ ಸ್ವಲ್ಪಮಾತ್ರ ಬಿಸಿಗೇ ಗಾಳಿಯು ಒತ್ತಡಕ್ಕೊಳಗಾಗಿ ಬಾಳೇ ಹಣ್ಣು ಸೀಸೆಯೊಳಗೆ ಹೋಯಿತೇನು?" ಎಂದು ಮಾನಸನು ಕೇಳಿದನು.

ಮಾನಸನ ಸಹಾಧ್ಯಾಯಿಯಾದ ಸತ್ಯಾನಂದನು, ತನ್ನ ವೇಷದ ಜುಟ್ಟು ಬಟ್ಟೆ ಮುಂತಾದುವನ್ನು ತೆಗೆಯುತ್ತ ನಕ್ಕು, "ಹೌದು ಹೌದು. ಸೀಸೆಯಲ್ಲಿ ಬೆಂಕಿ ಉರಿಯುವಾಗ ಗಾಳಿ ತುಂಬ ವ್ಯಾಕೋಚಿತವಾಗುತ್ತದೆ. ಆ ಕ್ಷಣದಲ್ಲಿ ಬಾಳೇ ಹಣ್ಣನ್ನು ಸೀಸೆಯ ಬಾಯಿಗೆ ಅಡ್ಡವಿಟ್ಟರೆ ಒಳಗಿನ ಗಾಳಿ ತಣ್ಣಗಾಗಿ ಸಂಕೋಚಿಸುತ್ತಿದ್ದಂತೆ, ಹೊರಗಿನ ಗಾಳಿಯ ಒತ್ತಡದಿಂದ ಬಾಳೇ ಹಣ್ಣು ಸೀಸೆಯೊಳಗೆ ಇಳಿದುಬಿಡುತ್ತದೆ. ಅಷ್ಟೇ ಹೊರತು ಮಂತ್ರ ತಂತ್ರಗಳೆಲ್ಲ ನನಗೇನು ಗೊತ್ತಿದೆ?" ಎಂದನು.



# ಗಂಗಾವತರಣ



ಅಯೋಧ್ಯೆಯನ್ನು ಪಾಲಿಸಿಕೊಂಡಿದ್ದ ಸಗರನಿಗೆ ಕೇಶಿನಿ ಮತ್ತು ಸುಮತಿ ಎಂಬ ಇಬ್ಬರು ಹೆಂಡತಿಯರು. ಮಕ್ಕಳಿಗಾಗಿ ಸಗರನು ತನ್ನ ಹೆಂಡತಿಯರೊಂದಿಗೆ ಹಿಮಾಲಯದಲ್ಲಿ ತಪಸ್ಸು ಮಾಡಿದನು.



ಅದರ ಫಲಿತವಾಗಿ ಕೇಶಿನಿಗೆ ಅಸಮಂಜಸನೆಂಬ ಮಗನು ಹುಟ್ಟಿದನು. ಸುಮತಿ ಒಂದು ಪಿಂಡ ವನ್ನು ಪ್ರಸವಿಸಿದಳು. ಅದು ಒಡೆದು ಅದ ರಿಂದ ಸಾವಿರ ಮಂದಿ ಕುಮಾರರು ಹುಟ್ಟಿದರು.



ಸಗರನು ಅಶ್ವಮೇಧಯಾಗಕ್ಕೆ ತೊಡಗಿ, ಕುದುರೆಯನ್ನು ಸ್ವೇಚ್ಛೆಯಾಗಿ ಬಿಟ್ಟನು. ಸಗರನ ಅಧಿಕೃತೆಗೆ ಕರುಬಿದ ದೇವೇಂದ್ರನು ಯಾಗಾಶ್ವವನ್ನು ಕದ್ದುಕೊಂಡು ಹೋಗಿ, ಪಾತಾಳದಲ್ಲಿ ಕಪಿಲನ ಆಶ್ರಮದಲ್ಲಿ ಅಡಗಿಸಿಟ್ಟನು.



ತನ್ನ ಕುದುರೆ ಕಾಣದೆ ಹೋದುದನ್ನು ತಿಳಿದ ಸಗರನು ಅದನ್ನು ಹುಡುಕಿ ತರಲು ಸಾವಿರ ಮಂದಿ ಕುಮಾರರನ್ನು ಕಳುಹಿಸಿದನು. ಅವರು ಎಲ್ಲಾ ದಿಕ್ಕುಗಳಲ್ಲಿ ಹುಡುಕಿದರೂ ಕುದುರೆಯ ಜಾಡು ತಿಳಿಯಲಿಲ್ಲ.



ಕಡೆಗೆ ಅವರು ಭೂಮಿಯನ್ನು ಅಗೆದು ಪಾತಾಳವನ್ನು ಸೇರಿ, ಅಲ್ಲಿರುವ ಕುದುರೆಯನ್ನು ನೋಡಿದರು. ಅವರು ಕುದುರೆಯನ್ನು ತೆಗೆದುಕೊಳ್ಳಲು ನೋಡುವಾಗ, ಕಪಿಲನು ತನ್ನ ನೋಟದಿಂದ ಅವರನ್ನು ಭಸ್ಮಮಾಡಿಬಿಟ್ಟನು.



ಬಹಳ ಕಾಲ ಕಳೆಯಿತು. ತನ್ನ ಮಗಂದಿರ ಸುದ್ದಿ ತಿಳಿದುಕೊಂಡು ಬರಲು ಸಗರನು ಅಸಮಂಜಸನ ಮಗನಾದ ಅಂಶುಮಂತನನ್ನು ಕಳುಹಿಸಿದನು. ಅಂಶುಮಂತನು ಪಾತಾಳಕ್ಕೆ ಹೋಗಿ ಕಪಿಲನನ್ನು ಮೆಚ್ಚಿಸಿ ಕುದುರೆಯನ್ನು ತಂದನು. ಆದರೆ ಬೂದಿಯಾಗಿಹೋದ ಸಗರನ ಮಗಂದಿರನ್ನು ಸದ್ಗತಿಗೊಳಿಸಲು ಅವನಿಂದಾಗಲಿಲ್ಲ. ಅದಕ್ಕಾಗಿ ದೇವಲೋಕದಿಂದ ಗಂಗೆಯನ್ನು ಭೂಲೋಕಕ್ಕೆ ತರಬೇಕಾಗಿತ್ತು.

ಆ ಕೆಲಸ ಮಾಡಲು ಅಂಶುಮಂತನ ಮಗ ದಿಲೀಪನು ಪ್ರಯತ್ನಿಸಿದನು. ಅವನಿಂದ ಅದು ಸಾಧ್ಯವಾಗಲಿಲ್ಲ. ದಿಲೀಪನ ಮಗ ಭಗೀರಥನು ದೀರ್ಘಕಾಲ ತಪಸ್ಸು ಮಾಡಿ, ಗಂಗೆಯನ್ನು ಭೂಮಿಗೆ ತರುವವನಾಗುವಂತೆ ಬ್ರಹ್ಮನಿಂದ ವರವನ್ನು ಪಡೆದನು.





ಆದರೆ ಮಹಾಶಕ್ತಿಯ ಗಂಗಾ ಪ್ರವಾಹವು ಬೀಳುವ ಪೆಟ್ಟನ್ನು ಭೂಮಿ ತಾಳಲಾರದು. ಅದನ್ನು ತಾಳಬಲ್ಲವನು ಶಿವನೊಬ್ಬನೇ. ಭಗೀರಥನು ಶಿವನನ್ನು ಪ್ರಾರ್ಥಿಸಿ ಅವನ ಸಹಾಯವನ್ನು ಸಂಪಾದಿಸಿದನು.

ಹಿಮಾಲಯಪರ್ವತದಲ್ಲಿ ಶಿವನು ಗಂಗೆಯನ್ನು ಸ್ವೀಕರಿಸಲು ಗಟ್ಟಿಯಾಗಿ ನಿಂತನು. ಗಂಗೆ ಅವನ ಜಟಾಜೂಟದ ಮೇಲೆ ಬಂದು ಬಿದ್ದಳು. ಅಲ್ಲಿ ತನ್ನ ನೀರಿನ ವೇಗ ತಗ್ಗಿದ ಮೇಲೆ ನೆಲದ ಮೇಲಕ್ಕೆ ಇಳಿದಳು ಗಂಗೆ.





ಭೂಮಿಗಿಳಿದ ಗಂಗೆ ಉಲ್ಲಾಸದಿಂದ ಗುಡ್ಡಬೆಟ್ಟಗಳನ್ನಿಳಿದು ಓಡುತ್ತಾ, ಜಹ್ನುಮಹಾಮುನಿಯ ಆಶ್ರಮದೊಳಗೆ ಹೊಕ್ಕು ಅವನ ಅಗ್ನಿಹೋತ್ರವನ್ನು ಆರಿಸಿದಳು.



ಜಹ್ನುಮಹಾಮುನಿ ಕೋಪದಿಂದ ಗಂಗಾ ಜಲವನ್ನು ಪೂರ್ತಿಯಾಗಿ ಕುಡಿದುಬಿಟ್ಟನು. ಭಗೀರಥನು ಬಂದು ಬೇಡಿಕೊಂಡ ಮೇಲೆ, ಅವನು ತನ್ನ ಕಿವಿಯ ಮೂಲಕ ಗಂಗೆಯನ್ನು ಹೊರಗೆ ಬಿಟ್ಟನು. ಆ ವಿಧವಾಗಿ ಗಂಗೆಗೆ 'ಜಾಹ್ನವಿ' ಎಂಬ ಹೆಸರು ಬಂತು.



ಕಟ್ಟಕಡೆಗೆ ಗಂಗೆ ಭಗೀರಥನ ಹಿಂದೆ ಸಮುದ್ರ ಸೇರಿ, ಪಾತಾಳಕ್ಕಿಳಿದು, ದೀರ್ಘಕಾಲದಿಂದ ಬೂದಿಯಾಗಿ ಬಿದ್ದಿದ್ದ ಸಗರಪುತ್ರರ ಮೇಲೆ ಪ್ರವಹಿಸಿ, ಅವರಿಗೆ ಸದ್ಗತಿ ಬರುವಂತೆ ಮಾಡಿದಳು. ಭಗೀರಥನ ಆಶಯ ನೆರವೇರಿತು.

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫
## ಗೆದ್ದ ಶೀರ್ಷಿಕೆಗಳು ೧೯೭೮ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Srivatsa S. Vati



Azmat A. Syed

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಅಮ್ಮನ ಹಾಲಲ್ವೇ, ನೀ ಕುಡೀಬಾರದು

ಎರಡನೇ ಫೋಟೋ: ತಿನ್ನೋದೇ ಇಲ್ಲಲ್ವೇ, ರೋಗಾನೇ ಬಾರದು

ಕಳುಹಿಸಿದವರು: ಟಿ. ವಿ. ಇಂದಿರಮ್ಮ,

ಭಾಳೇಹೊಳೆ, ಚಿಕ್ಕಗಳೂರು, ಕರ್ನಾಟಕ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.

**ನಮಗೆಲ್ಲರಿಗೂ**
**ಇಷ್ಟವಾದ**
**ಪತ್ರಿಕೆ**

# ಚಂದಮಾಮ




## ನಿಮಗೂ ಇಷ್ಟ ತಾನೆ !

**ಚಂದಮಾಮ** ಹೆಂಗುಸರು, ಗಂಡುಸರು, ಮಕ್ಕಳು ಎಲ್ಲರೂ ಓದುತ್ತಾರೆ. ಇದು ಇಂಗ್ಲೀಷ್, ಹಿಂದೀ, ಮರಾಠೀ, ತೆಲುಗು, ಕನ್ನಡ, ತಮಿಳು, ಮಲೆಯಾಳ, ಗುಜರಾತಿ, ಬೆಂಗಾಲೀ, ಒರಿಯಾ, ಪಂಜಾಬಿ, ಅಸ್ಸಾಮೀಸ್ ಈ ಹನ್ನೆರಡು ಭಾಷೆಗಳಲ್ಲಿ ಹೊರಡುತ್ತದೆ. ಈ ಮಕ್ಕಳ ಪತ್ರಿಕೆಯಲ್ಲಿ ಅಪರೂಪವೆನಿಸುವ ಕಥೆಗಳಿರುತ್ತವೆ. ಅವು ಪ್ರತಿ ಹೃದಯವನ್ನೂ ಸಂತೋಷಗೊಳಿಸುತ್ತವೆ.

**ಚಂದಮಾಮ** ಮಕ್ಕಳ ಮಾಸಪತ್ರಿಕೆ. ಇದನ್ನು ಓದಿದರೆ ಚಿಕ್ಕವರ ಉತ್ಸಾಹವು ದೊಡ್ಡವರಿಗೆ ಬರುತ್ತದೆ; ದೊಡ್ಡವರ ವಿಜ್ಞಾನವು ಚಿಕ್ಕವರಿಗೆ ಉಂಟಾಗುತ್ತದೆ.



ಚಂದಾ ವಿವರಗಳಿಗೆ: ಡಾಲ್ಟನ್ ಏಜೆನ್ಸೀಸ್, ಚಂದಮಾಮ ಬಿಲ್ಡಿಂಗ್ಸ್, ಮದ್ರಾಸು-೬೦೦೦೨೬.



May 1978

# ಮಾಯಾ ಸರೋವರ

೨೮

[ ಮಾಯಾ ಸರೋವರೇಶ್ವರನು ತನ್ನ ಕೊರಳಿಗೆ ಬಿಸುಟ ಉರುಳು ಹಗ್ಗವನ್ನು ಕಡಿದು ಹಾಕಲು ಜಯಶೀಲನು ಪ್ರಯತ್ನಿಸುತ್ತಿರಲು, ಮಾಯಾ ಸರೋವರೇಶ್ವರನು ಅವನೊಂದಿಗೆ ಒಳಿತಾಗಿ ಮಾತಾಡಿ, ಕಾಂಚನಮಾಲೆಯೊಂದಿಗೆ ಅವನನ್ನು ತನ್ನ ಸ್ಥಾನಕ್ಕೆ ಕರೆದೊಯ್ಯ ತೊಡಗಿದನು. ಆ ಸಂಗತಿ ನರ ಭಕ್ಷಕರ ಮೂಲಕವಾಗಿ ಸಿದ್ಧ ಸಾಧಕನಿಗೆ ಗೊತ್ತಾಯಿತು.]

ನರಭಕ್ಷಕರು ತಾವು ಮರೆಯಲ್ಲಿದ್ದು ನೋಡಿದ ಸಂಗತಿಯನ್ನೆಲ್ಲಾ ಸಿದ್ಧ ಸಾಧಕನ ಮುಂದೆ ಹೇಳಿದರು. ವಿಚಿತ್ರವಾದ ಆನೆಯ ಮೇಲಿದ್ದವನನ್ನೂ, ಅವನು ಸಾಗಿಸಿಕೊಂಡು ಹೋಗುತ್ತಿರುವ ಮನುಷ್ಯನ ರೂಪ ರೇಖೆಗಳನ್ನೂ ಆ ನರಭಕ್ಷಕರ ಬಾಯಿಯಿಂದ ಹೊರಡಿಸಿದನು. ಆ ಮನುಷ್ಯನು ತನ್ನ ಮಿತ್ರನಾದ ಜಯಶೀಲನೇ ಹೌದೆಂದು ಸಿದ್ಧಸಾಧಕನಿಗೆ ಗೊತ್ತಾಯಿತು. ಆದರೆ ಅವನೊಂದಿಗಿರುವ ಆ ಪರಮ ಸುಂದರ ಯುವತಿ ಯಾರಾಗಿರಬಹುದು? ನರ ಭಕ್ಷಕರು ವರ್ಣಿಸಿದ ಲಕ್ಷಣ ನೋಡಿದರೆ ಮಾನವಿಯಂತಿದ್ದಾಳೆ. ಆನೆಯ ಮೇಲಿನವನೊಂದಿಗೆ ಅವಳಾಗಿ ಹತ್ತಿಕೊಂಡಳೆಂಬುದನ್ನು ಕೇಳುವಾಗ ಮಾಯಾ ಸರೋವರದವಳಂತೆಯೂ ಊಹಿಸಬೇಕಾಗುತ್ತದೆ. ಜಯಶೀಲನೇಕೆ ಅವರ ಕೈಗೆ ಸಿಕ್ಕಿಕೊಂಡ? ಇದೊಂದು ಆಶ್ಚರ್ಯದ ವಿಷಯವೇ ಸರಿ. ಸಮಸ್ಯೆ ಜಟಿಲವಾಗುವಂತೆಯೂ ಇದೆ.

ನರಭಕ್ಷಕರು ಹೇಳಿದ ಮಾತುಗಳನ್ನು ಕನಕಾಕ್ಷ ರಾಜನೂ ಕೇಳಿ ಆಶ್ಚರ್ಯಪಡುತ್ತ ನಿಂತಿದ್ದನು. ಸಿದ್ಧ ಸಾಧಕನು ರಾಜನನ್ನು ನೋಡಿ, "ಮಹಾರಾಜರೇ, ಇನ್ನು ನನಗೆ ಅಪ್ಪಣೆ ಕೊಟ್ಟುಬಿಡಿರಿ. ನನ್ನ ಸ್ನೇಹಿತ



ನಾದ ಜಯಶೀಲನನ್ನು ಆ ಮಾಯಾ ಸರೋವರದ ದುಷ್ಟರು ಹೇಗೋ ಮಂಕುಗೊಳಿಸಿ ಬಂಧಿಸಿಕೊಂಡು ಹೋಗುತ್ತಾರೆಂದು ತಿಳಿಯಿತು. ಅಷ್ಟೊಂದು ಶೂರನಾದವನು ಅದು ಹೇಗೆ ಸಿಕ್ಕಿಕೊಂಡನೋ ಅರ್ಥವಾಗುವುದಿಲ್ಲ. ಯಾವುದು ಏನಾದರೂ ಅವನನ್ನು ರಕ್ಷಿಸಬೇಕಾದುದು ನನ್ನ ಮುಖ್ಯ ಕರ್ತವ್ಯ. ಉಳಿದುದೆಲ್ಲ ಆಮೇಲೆ, ಆದ್ದರಿಂದ ಹೊರಟೆ" ಎಂದು ಹೇಳಿ ರಾಜನ ಅಪ್ಪಣೆಗೂ ಕಾಯದೆ, ನರವಾನರದ ಭುಜದ ಮೇಲೆ ಏರಲು ನೋಡಿದನು.

ಆಗ ಕನಕಾಕ್ಷರಾಜನು ಅವನನ್ನು ತಡೆದು, "ಸಿದ್ಧಸಾಧಕನೇ, ಆ ಜಯಶೀಲ ನಿನಗೆಷ್ಟು ಆಪ್ತನೋ ನಮಗೂ ಅಷ್ಟೇ ಸಮೀಪದವನು. ಅವನನ್ನು ರಕ್ಷಿಸುವ ಬಾಧ್ಯತೆ ನನಗೂ ಇದೆ. ಕೆಲವಂದಿ ಭಟರನ್ನೂ, ಅಶ್ವಿಕರನ್ನೂ ಕರೆದುಕೊಂಡು ನಾನೂ ನಿನ್ನೊಂದಿಗೆ ಬರುತ್ತೇನೆ. ನನ್ನ ಕಾರ್ಯಕ್ಕಾಗಿ ನನ್ನಿಂದ ವೀಳ್ಯಪಡೆದು ಹೊರಟ ಜಯಶೀಲನ ಸಂಗತಿ ಕೇಳಿ ನಾನಾದರೂ ಹೇಗೆ ಸುಮ್ಮನಿರಲಿ? ಈ ವಿಷಯದಲ್ಲಿ ನಾವು ತಡಮಾಡಬಾರದು. ಆ ಮಾಯಾ ಸರೋವರವು ಎಲ್ಲಿರುವುದೆಂದು ಮೊದಲು ತಿಳಿದುಕೊಳ್ಳಬೇಕು. ಆದಕ್ಕಾಗಿ ಎಲ್ಲೆಲ್ಲಿ ಸುತ್ತುವುದಕ್ಕಿಂತ ನಿನ್ನ ದಾಸನಾಗಿರುವ ಈ ಜಲವೃಕಬಂಟನನ್ನು ಕೇಳಿ ತಿಳಿದುಕೊಳ್ಳಬಾರದೇನು? ಅವನಿಗೆ ಗೊತ್ತೇ ಇರಬೇಕಲ್ಲ?" ಎಂದು ಹೇಳಿದನು.

"ನಿಜನಿಜ!" ಎಂದು ಸಿದ್ಧಸಾಧಕನು ಶೂಲವನ್ನು ಜಲವೃಕಬಂಟನ ಎದೆಗೆ ಗುರಿ ಹಿಡಿದು, "ಎಲ್ಲವೋ ಜಲವೃಕಬಂಟಾ! ನೀನು ನನ್ನ ವಿಶ್ವಾಸಕ್ಕೆ ಪಾತ್ರನಾದ ಭಟನು ಹೌದೋ ಅಲ್ಲವೋ? ಅಥವಾ ನಿನ್ನ ಹಳೇ ಯಜಮಾನ ಮಾಯಾ ಸರೋವರದ ಜಲವೃಕ ರಾಕ್ಷಸರ ಪಕ್ಷವಾಗಿ ಗೂಢಚಾರನಾಗಿ ನನ್ನ ಹತ್ತಿರ ನಟಿಸಿಕೊಂಡಿರುವೆಯಾ? ಈಗ ಪರೀಕ್ಷೆಕಾಲ, ಗೊತ್ತಾಗಿ ತೀರಬೇಕು. ನಿಜ ಹೇಳಿಬಿಡು!" ಎಂದನು.

ಅವನ ಪ್ರಶ್ನೆಗೆ ಜಲವೃಕಬಂಟ ಒಂದಿಷ್ಟೂ ಹೆದರದೆ, ತನ್ನ ಕಲ್ಲಿನ ಗದೆಯನ್ನು ಸಿದ್ಧಸಾಧಕನ ಪಾದಗಳ ಮುಂದೆ ಇಟ್ಟು, "ದೊರೆಗಳೇ, ನಿಜವಾದ ಜಲವೃಕನು ಆಡಿದ ಮಾತು ತಪ್ಪಲಾರ. ಹಾಗೆ ತಪ್ಪಿದವನನ್ನು ನೀರು ನರಿಯ ಹಾಗೆ ಬೇಟೆಯಾಡಿ ಕೊಲ್ಲುತ್ತೇವೆ. ನಾನು ತಮಗಾಗಿ ಪ್ರಾಣ ಬೇಕಾದರೂ ಕೊಡಲು ಸಿದ್ಧನಾಗಿದ್ದೇನೆ. ಪರೀಕ್ಷಿಸಿರಿ ನನ್ನ ಸ್ವಾಮಿಭಕ್ತಿಯನ್ನು! ಈಗ ಏನು ಮಾಡಬೇಕೋ ಹೇಳಿಬಿಡಿ!" ಎಂದನು.

"ಈ ಮಾತು ನಿಜವಾದರೆ ಈಗ ಹೇಳು. ಆ ಮಾಯಾ ಸರೋವರ ಎಲ್ಲಿದೆ? ಸರಿಯಾಗಿ ಹೇಳು" ಎಂದನು ಸಿದ್ಧಸಾಧಕ.

ಆ ಪ್ರಶ್ನೆ ಕೇಳಿ ಜಲವೃಕನು ಪೆಟ್ಟಬಿದ್ದು, "ದೊರೆಗಳೇ, ಹಿಂದೆ ಒಂದುಸಾರಿ ನಿಮಗೆ ಈ ವಿಷಯ ಹೇಳಿದ್ದೇನೆ. ಆ ಸರೋವರ ಎಲ್ಲಿರುವು

ದೆಂದು ನಾನು ಹೇಳಿದರೆ ನನ್ನ ತಲೆಯೊಡೆದು ಸಾಯುತ್ತೇನೆ. ಅದು ನಮ್ಮ ಜಾತಿಯವರಿಗೆ ಸರೋವರದ ರಾಜನೂ, ನಮ್ಮ ರಾಜನೂ ನಮಗೆ ಕೊಟ್ಟ ಶಾಪ. ನಾನೇನು ಮಾಡಲಿ ದೊರೇ ?" ಎಂದು ಮುಖವನ್ನು ಜೋತುಹಾಕಿಕೊಂಡು.

ಅವನ ಮಾತು ಕೇಳಿ ಸಿದ್ಧಸಾಧಕನು ಗಹಗಹಿಸಿ ನಕ್ಕು. "ಆ ಸರೋವರದ ನೀರು ಮುಳುಕನಿಗೆ ಶಾಪ ಕೊಡುವಷ್ಟು ಶಕ್ತಿಯಿದ್ದರೆ ಹಂಸರಥದ ಮೇಲಿಂದ ಪಟ್ಟು ತಪ್ಪಿಬೀಳುವಾಗ, ಅಲ್ಲಿಂದ ನೇರಾಗಿ ನರಭಕ್ಷಕರ ಕುದಿಯುವ ನೀರಿನೊಳಗೆ ಬೀಳಬೇಕಿತ್ತೇ ? ಸುರಕ್ಷಿತವಾದ ನೆಲಕ್ಕಾದರೂ ಬೀಳದೆ ? ಶಾಪವೇನು ಕೊಡುತ್ತಾನೆ ಮಣ್ಣು ? ನಿಮ್ಮನ್ನು ಸುಮ್ಮನೆ ಹೆದರಿಸಿಟ್ಟಿದ್ದಾರೆ," ಎಂದನು.

ಜಲವೃಕನು ಗಡಗಡ ನಡುಗುತ್ತ, "ದೊರೆಗಳೇ, ನೀವು ನನ್ನ ಮಾತು ನಂಬುವುದಿಲ್ಲವೆಂದು ಗೊತ್ತಾಯಿತು. ಇನ್ನು ನನಗೆ ಸಾವು ತಪ್ಪುವಂತಿಲ್ಲ. ಆದರೂ ಬಾಯಿಯಿಂದ ಹೇಳುವ ಬದಲಿಗೆ ಸಂಜ್ಞೆಗಳಿಂದ ತಿಳಿಯಪಡಿಸಿದರೆ ಒಂದುವೇಳೆ ಸಾಯದೆ ಬದುಕಿರುವೆನೋ ಏನೋ ? ಪ್ರಯತ್ನಿಸಿ ನೋಡುತ್ತೇನೆ" ಎಂದು ಹೇಳಿ ಆಚೆಗೆ ಹೋಗಿ ಮರದಿಂದ ಒಣಕಡ್ಡಿಯೊಂದನ್ನು ಮುರಿದು ತಂದನು.

"ಎಲೈ ಮೂಢ ನರಮೃಗನೇ ! ಏನೂ ಸಂದೇಹ ಪಡಬೇಡ. ಧೈರ್ಯವಾಗಿರು. ನಿನ್ನ ಜೀವಕ್ಕೆ ಯಾವ ಅಪಾಯವೂ ಇಲ್ಲ. ಮಹಾಕಾಲನ ಭಕ್ತನಾದ ನಾನು ಹೇಳುತ್ತೇನೆ. ಒಂದುವೇಳೆ ನೀನು ಸಾಯುವುದೇ ನಿಜವಾದರೆ ಮರುಕ್ಷಣವೇ ಕೈಲಾಸಕ್ಕೆ ಕಳುಹಿಸಿ, ಅಲ್ಲಿಯ ಶಿವಗಣಗಳೊಂದಿಗೆ ನಿನಗೆ ದೈವತ್ವ ಬರಿಸುತ್ತೇನೆ," ಎನ್ನುತ್ತಾ ಸಿದ್ಧಸಾಧಕನು ಶೂಲವನ್ನು ಆಕಾಶದ ಮೇಲಕ್ಕೆ ಎತ್ತಿತೋರಿಸಿದನು.

ಜಲವೃಕನು ತಾನು ತಂದ ಒಣಕಡ್ಡಿಯಿಂದ ನೆಲದಲ್ಲಿ ಗೆರೆಗಳನ್ನು ಗೀರುತ್ತ ನಡುನಡುವೆ "ಅಯ್ಯೊ !



ತಲೆ ಒಡೆಯುತ್ತದೆ. ಎದೆ ಗುಂಡಿಗೆಯಲ್ಲಿ ಏನೋ ಸಿಕ್ಕಿಕೊಂಡ ಹಾಗಾಗುತ್ತದಲ್ಲ !" ಎಂದೂ ಕೂಗುತ್ತಿದ್ದನು.

"ಏನೂ ಆಗೋದಿಲ್ಲ ! ನನ್ನನ್ನು ನಂಬು. ನನ್ನ ಮಹಾಕಾಲನು ನಿನ್ನನ್ನು ರಕ್ಷಿಸುತ್ತಾನೆ" ಎಂದು ಸಿದ್ಧಸಾಧಕನು ನೆಲವನ್ನು ಕುಟ್ಟಿ ಕುಟ್ಟಿ ಧೈರ್ಯ ಹೇಳಿದನು.

ಅವನ ಅವಸ್ಥೆಯನ್ನು ನೋಡಿ ಕನಕಾಕ್ಷರಾಜನು ಸಮೀಪ ಬಂದು, "ಸಿದ್ಧಸಾಧಕಾ, ನನ್ನ ಮಕ್ಕಳನ್ನು ತಕ್ಕಷ್ಟು ಅಂಗರಕ್ಷಕರ ಜತೆ ಕೊಡದೆ ಅರಣ್ಯಕ್ಕೆ ಹೋಗಲು ಬಿಟ್ಟದ್ದೇ ಇಷ್ಟೆಲ್ಲಾ ಕಷ್ಟಗಳಿಗೆ ಕಾರಣವಾಯಿತು. ಪಾಪ, ಈ ನೀರು ತೋಳದವನ ಸಂಕಟ ನೋಡಲಾರೆ. ನಿಜಕ್ಕೂ ತಲೆಯೊಡೆದು ಸಾಯುವನೇನೋ ?" ಎಂದನು.

"ಇಲ್ಲ ಮಹಾರಾಜರೇ, ಇವನು ಸಾಯುವುದಿಲ್ಲವೆಂಬುದಕ್ಕೆ ನನ್ನ ಪ್ರಾಣದ ಆಣೆ ಕೊಡುತ್ತೇನೆ. ಶತ



ಮೂರ್ಖನಿವನು. ಮಹಾಕಾಲನಾದ ಶಿವನ ಚಿತ್ತ ವಿಲ್ಲದೆ ಯಾವ ನರಮನುಷ್ಯರಿಗೂ ಇತರರನ್ನು ಶಪಿಸುವ ಶಕ್ತಿ ಬರುವುದಿಲ್ಲ." ಎಂದು ಹೇಳಿ ಸಿದ್ಧ ಸಾಧಕನು ನೆಲದಲ್ಲಿ ಗೀಚಿದ ಗೆರೆಗಳನ್ನು ಪರೀಕ್ಷಿಸಿ ನೋಡುತ್ತ, "ಸ್ವಲ್ಪ ಬಾಯಿಬಿಟ್ಟು ಹೇಳಿಬಿಡು. ಈ ನೇರ ಗೆರೆಗಳೇನು ? ಈ ವಕ್ರವಕ್ರ ಗೆರೆಗಳೇನು ?" ಎಂದು ಕೇಳಿದನು.

ಜಲವೃಕರಾಕ್ಷಸನು ತಲೆ ತಗ್ಗಿಸಿಕೊಂಡೇ ನಡುಗುವ ಸ್ವರದಿಂದ, "ದೊರೆಗಳೇ, ಇವು ಅಲ್ಲಿ ಸಮೀಪ ದಲ್ಲಿರುವ ಗುಡ್ಡಗಳು. ಇವೆಲ್ಲಾ ಅರಣ್ಯ ವೃಕ್ಷಗಳು. ಅವುಗಳಲ್ಲಿ ಎತ್ತರವಾದ ಈ ಮರ, ಈ ಕಲ್ಲಿನ ಗುಡ್ಡದ ಮೇಲಿದೆ. ಆ ಮರದ ಮೇಲೆ ಹತ್ತಿ ಕೊನೆಯಕೊಂಬೆಗೆ ಹೋಗಿ, ಒಂದುಸಾರಿ ಮೂಡು ದಿಕ್ಕನ್ನೂ ಮತ್ತೊಂದುಸಾರಿ ಪಶ್ಚಿಮ ದಿಕ್ಕನ್ನೂ ನೋಡಿ ಆ ಮೇಲೆ ಉತ್ತರ ದಿಕ್ಕನ್ನು ನೋಡಿದರೆ, ಮಾಯಾಸರೋವರ ಪ್ರಾಂತ ಜಗಜಗನೆ ಕಾಣುತ್ತದೆ"

ಎಂದವನೇ ಎರಡು ಕೈಗಳಿಂದಲೂ ತಲೆಯನ್ನು ಒತ್ತಿ ಹಿಡಿದು, ಗಡಗಡಿಸುವ ಸ್ವರದಿಂದ, "ಅಯ್ಯೋ ! ದೊರೆಗಳೇ! ಗುಟ್ಟು ಹೇಳಿಬಿಟ್ಟೆ. ತಲೆ ಒಡೆಯುತ್ತಾ ಇದೆ. ಸತ್ತೆ! ಸತ್ತೆ! ಹಾ ! ಮಹಾಜಲವೃಕೇಶ್ವರಾ!" ಎನ್ನುತ್ತಾ ಧಡಾಲ್ಲನೆ ನೆಲದಲ್ಲಿ ಕೈಕಾಲು ಚಾಚಿ ಬಿದ್ದು ಸ್ತಬ್ಧನಾದನು.

ಸಿದ್ಧಸಾಧಕನು ತಟ್ಟನೆ ಬಾಗಿ ಜಲವೃಕನ ಮೂಗಿನ ಹತ್ತಿರ ಬೆರಳು ಒಡ್ಡಿನೋಡಿ, ಅವನಿನ್ನೂ ಉದ್ದುದ್ದ ಉಸಿರು ಬಿಡುತ್ತಿರುವುದನ್ನು ಗಮನಿಸಿ ಮುಗುಳು ನಗುತ್ತ, "ಮಹಾರಾಜರೇ, ಮೂಢನಂಬುಗೆಗಳು ಮುಪ್ಪು ತರುತ್ತವೆಂಬುದಕ್ಕೆ ಈ ಜಲವೃಕನೇ ಸಾಕ್ಷಿ. ಇವನು ಶಾಪದ ಭಯದಿಂದ ಎದೆಯವೇಗ ಹೆಚ್ಚಿಸಿ ಕೊಂಡು ಕೆಳಗೆ ಬಿದ್ದನೇ ಹೊರತು ಸಾಯಲಿಲ್ಲ. ಸಾಧಾರಣದವರನ್ನು ಕೊಲ್ಲಲಿಕ್ಕೂ ಇಷ್ಟು ಸಾಕನ್ನಿ. ಇವನದು ಕಲ್ಲುಗುಂಡಿಗೆ. ಏನೂ ಆಗದು. ಬದುಕು ತ್ತಾನೆ ನೋಡಿ" ಎಂದು ಹೇಳಿ ಪಕ್ಕದಲ್ಲಿದ್ದ ನರಭಕ್ಷಕ ರೊಡನೆ, "ಏನು ನೋಡುತ್ತೀರಿ ? ಇವನನ್ನು ಬಿಗಿದು ತಿಂದುಬಿಡುವ ಆಲೋಚನೆಯೋ ? ಬೇಗ ಹೋಗಿ, ನಾಲ್ಕಾರುಬಿಂದಿಗೆ ನೀರು ತನ್ನಿ" ಎಂದನು.

ನರಭಕ್ಷಕರು ಆಶೆಯಿಂದ ಜಲವೃಕರಾಕ್ಷಸನನ್ನು ನೋಡುತ್ತ ಸುಮ್ಮನೆ ನಿಂತರು. ಅವರ ಆಶಯ ವನ್ನು ಗಮನಿಸಿದ ಸಿದ್ಧಸಾಧಕನು ಶೂಲವನ್ನೆತ್ತಿ, "ದುಷ್ಟರೇ ! ನನ್ನಾಜ್ಞೆ ಕೇಳಲಿಲ್ಲವೇ ? ಸುಮ್ಮನೆ ನಿಂತಿದ್ದೀರಾ ? ನೀರು ತರುವಿರೋ ಇಲ್ಲವೋ ?" ಎಂದು ಕಣ್ಣು ಕೆಕ್ಕರಿಸಿ ಗರ್ಜಿಸಿದನು.

ನರಭಕ್ಷಕರ ನಾಯಕನು ಸನ್ನೆಮಾಡಿದ ಕೂಡಲೇ ವೃದ್ಧ ಪೂಜಾರಿ ಮುಂದೆ ಬಂದು, ಕನಕಾಕ್ಷರಾಜನ ಮುಂದೆ ಸಾಷ್ಟಾಂಗ ಬಿದ್ದು ಎದ್ದು ಕೈ ಜೋಡಿಸಿ, "ಮಹಾಬುದ್ಧೀ! ಮಹಾ ದೊರೇ! ಕಾಡು ಮೂಲೆ ಗಳಲ್ಲಿ ಬದುಕಿಕೊಂಡಿರುವ ನಮಗೆ ಒಳ್ಳೇದೂ ಕೆಟ್ಟುದೂ, ಮಾನಾಮರ್ಯಾದೇ ಗೊತ್ತಿರಲಿಕ್ಕಿಲ್ಲ.

ಯುವರಾಜ

ಮಹಾರಾಜರು ಅಂದರೆ ನಿಮ್ಮ ಹೆಸರಾಗಿರಲಿಕ್ಕಿಲ್ಲ, ಅಧಿಕಾರದ ಹೆಸರು ಅಂತ ಕಾಣುತ್ತೆ. ತಾವು ಈ ಶೂಲ ಹಿಡಿದ ಭೂತರಾಜನನ್ನು ಆಚೆಗೆ ಕಳುಹಿಸಿ, ಈ ನೀರು ರಾಕ್ಷಸನನ್ನು ನಮಗೆ ಒಪ್ಪಿಸಿಬಿಡಿ. ನಿಮ್ಮ ಹೆಸರು ಹೇಳಿಕೊಂಡು ತಿನ್ನುತ್ತೇವೆ ಬುದ್ಧೀ. ಇಲ್ಲಾ ಅನ್ನಬಾರದು." ಎಂದನು.

ಆ ಕ್ಷಣವೇ ಸಿದ್ಧಸಾಧಕನು ಹಾರಿ ಅವನ ತಲೆ ಕೂದಲು ಹಿಡಿದು ಕುಲುಕುತ್ತ, "ಎಲೋ, ನರಭಕ್ಷಕ ಮೃಗವೇ! ಎಂಥಾ ಮಾತು ಆಡುತ್ತೀ ಮಹಾರಾಜರ ಮುಂದೆ! ನೀನು ನನ್ನ ಶೂಲದ ಮೊನೆಯಿಂದ ಈಗಲೇ ಮಹಾಕಾಲನಿಗೆ ಬಲಿಯಾಗಿ ಬಿಡು!" ಎಂದು ಶೂಲವನ್ನೆತ್ತಿದನು. ಆದರೆ ಎತ್ತಿದ ಶೂಲ ಹಾಗೇ ನಿಂತಿತು.

ಕಾರಣವೇನಂದರೆ ಆಗಲೇ ದೂರದಿಂದೊಂದು ಕಂಠಸ್ವರವು ಗಟ್ಟಿಯಾಗಿ, "ಸಿದ್ಧಸಾಧಕಾ! ಅವಸರ ಪಡಬೇಡ. ಮಾಯಾ ಸರೋವರದ ಜಲವೃಕ ರಾಕ್ಷಸರೊಂದಿಗೆ ಹೋರಾಡಬೇಕಾದ ಪರಿಸ್ಥಿತಿ ಬಂದಿದೆ. ಅದಕ್ಕೆ ಈ ನರಭಕ್ಷಕರ ಸಹಾಯವೂ ಬೇಕು. ಬಂದೆ, ಬಂದೆ ತಡೆ!" ಎಂದು ಕೇಳಿಸಿತು.

ಸಿದ್ಧಸಾಧಕನು ಶೂಲವನ್ನು ಕೆಳಗಿಳಿಸಿ, ಆ ಕಡೆಗೆ ನೋಡಿದನು. ಅದೇ ಸಂಧಿಸಾಧಿಸಿ ನರಭಕ್ಷಕರ ವೃದ್ಧ ಪೂಜಾರಿ ಓಡಿಹೋಗಿ ತನ್ನವರ ಗುಂಪಿನೊಳಗೆ ಅಡಗಿಹೋದನು.

ಹಾಗೆ ಕೂಗಿಕೊಂಡು ಬಂದವನು ಸರ್ಪನಖನೇ. ಅವನು ಬಂದು ಕುದುರೆಯಿಂದ ಕೆಳಗೆ ಹಾರಿ, ನೆಲದ ಮೇಲೆ ಸತ್ತ ಹಾಗೆ ಬಿದ್ದಿರುವ ಜಲವೃಕನನ್ನು ನೋಡಿ, "ಸಾಧಕಾ, ಇವನನ್ನು ಪರಲೋಕಕ್ಕೆ ಕಳುಹಿಸಿಬಿಟ್ಟೆಯೇನು? ಇವನು ನಿನ್ನ ನಂಬುಗೆಯ ಬಂಟನಲ್ಲವೇ?" ಎಂದನು.

"ಇವನು ನನ್ನ ನಂಬುಗೆಯ ಬಂಟನೆಂಬುದು ಹೋಗಿ ಇವನಿಗೆ ನಿಮ್ಮ ಹಾಗೆಯೇ ಇವನ ರಾಜನ



ಮೇಲೆ ಮಾತ್ರವಲ್ಲದೆ ಸರೋವರೇಶ್ವರನ ಶಕ್ತಿಯಲ್ಲಿ ಕೂಡಾ ಗಟ್ಟಿನಂಬುಗೆ ಇರುವ ಹಾಗಿದೆ. ರಹಸ್ಯ ಹೇಳಿದರೆ ಶಾಪದಿಂದ ಸಾಯುತ್ತೇನೆನ್ನುತ್ತಾ ನನಗೆ ಹೆದರಿ ಮಾಯಾ ಸರೋವರದ ದಾರಿಯನ್ನು ಗೀಟುಗಳ ಸಂಜ್ಞೆಯಿಂದ ತಿಳಿಸುತ್ತಾ ಕಡೆಗೆ ಹೀಗೆ ಸತ್ತ ಹಾಗೆ ಬಿದ್ದಿದ್ದಾನೆ. ಆದರೆ ಸಾಯಲಿಲ್ಲ. ಹೆದರಬೇಕಾಗಿಲ್ಲ." ಎಂದ ಸಿದ್ಧಸಾಧಕ.

ಅಷ್ಟರಲ್ಲಿ ಕೆಲವುಮಂದಿ ಕನಕಾಕ್ಷರಾಜನ ಭಟರು ಪಾತ್ರದಲ್ಲಿ ನೀರು ತಂದು ಜಲವೃಕರಾಕ್ಷಸನ ಮೇಲೆ ಹೊಯಿದರು. ಆ ತಣ್ಣೀರಿನಿಂದ ಶರೀರವು ಒದ್ದೆಯಾಗುತ್ತಲೇ ಅವನು ನೆಲದ ಮೇಲೆ ಹಾಗೆ ಹೀಗೆ ಹೊರಳಾಡುತ್ತ, ಮೆಲ್ಲ ಕಣ್ಣು ತೆರೆಯುತ್ತ, "ನಾನು ಎಲ್ಲಿದ್ದೇನೆ? ಇದು ನರಕವೋ, ಅಲ್ಲ ಸರೋವರವೋ? ಯಾರಿದ್ದೀರಿ ಇಲ್ಲಿ?" ಎಂದು ಕೂಗತೊಡಗಿದನು. ಸಿದ್ಧಸಾಧಕನು ಅವನ ಬೆನ್ನಿನ ಮೇಲೆ ಕಾಲಿನಿಂದ ಹದವಾಗಿ ಒದೆಯುತ್ತ, "ನಾನಿದ್ದೇನೆ.



ನೀನೂ ಇದ್ದೀ. ಏಳಪ್ಪಾ, ಜಲವ್ಯಕಭಟಾ! ನಿನಗೆ ಶಾಪ ವಿಮೋಚನೆಯಾಗಿದೆ. ನನ್ನ ದೇವ ಮಹಾಕಾಲ ನಿನ್ನನ್ನು ಬದುಕಿಸಿದ್ದಾನೆ. ನೀನು ಎಂದಿನಂತೆ ಭೂಮಿಯಲ್ಲೇ ಇರುವಿ! ಇನ್ನೇನೂ ಭಯವಿಲ್ಲ" ಎಂದನು ಗಂಭೀರವಾಗಿ.

ಆ ಮಾತು ಕೇಳಿ ಜಲವ್ಯಕನು ಎದ್ದು ಕುಳಿತನು. ಸರ್ಪನಖನು ತೃಪ್ತಿಯಿಂದ ತಲೆಯಾಡಿಸಿ, ಸಮೀಪದಲ್ಲಿದ್ದ ರಾಜಭಟರನ್ನೂ, ರಾಜನನ್ನೂ ನೋಡಿ, ಏನೋ ಯೋಚಿಸಿ ತಲೆದೂಗುತ್ತ, "ಇವರನ್ನೆಲ್ಲ ನೋಡುವಾಗ ನನಗೊಂದು ಅನುಮಾನವಾಗುತ್ತದೆ. ವೈದ್ಯದೇವನು ಹಂಸರಥದಲ್ಲಿ ಹಾರುವಾಗ ಇವರ ವಿಷಯವೇ ಹೇಳಿದುದೆಂದು ಕಾಣುತ್ತದೆ. ಅವರ ವರ್ಣನೆಗೆ ಸರಿಯಾಗಿಯೇ ಇವರೂ ಕಾಣುತ್ತಿದ್ದಾರೆ. ಇವರೇ ಅಲ್ಲವೇ ಹಿರಣ್ಮಪುರದ ಮಹಾರಾಜರಾದ ಕನಕಾಕ್ಷ ದೊರೆಗಳು?" ಎಂದನು. ಕನಕಾಕ್ಷರಾಜನು ಆ ಕ್ಷಣದವರೆಗೂ ಸರ್ಪನಖನ ವಿಚಿತ್ರವೇಷವನ್ನೂ, ಅವನ ವಾಹನ ಜಲಾಶ್ವವನ್ನೂ ಆಶ್ಚರ್ಯದಿಂದ ನೋಡುತ್ತಿದ್ದವನು, ಅವನು ಹೇಳಿದ ಮಾತಿನ ಅರ್ಥವಾಗದೆ, "ಇವನಾರು? ಯಾರು ಆ ವೈದ್ಯದೇವ? ನಾನು ಕೇಳಿಯೇ ಇಲ್ಲವಲ್ಲಾ! ನನ್ನ ರಾಜ್ಯದವನೇನು?" ಎಂದು ಕೇಳಿದನು.

"ಅದೇನೋ ನಾನರಿಯೆನು ಮಹಾರಾಜರೇ. ಅವರೆಲ್ಲ ನನ್ನ ಹಿಂದೆಯೇ ಹೊರಟು ಇಲ್ಲಿಗೇ ಬರುತ್ತಿದ್ದಾರೆ." ಎಂದ ಸರ್ಪನಖ.

"ಸಿದ್ಧಸಾಧಕಾ, ಈ ವೈದ್ಯ ದೇವನನ್ನು ನೀನು ಬಲ್ಲೆಯಾ?" ಎಂದು ರಾಜನು ಕೇಳಿದನು. ಸಿದ್ಧಸಾಧಕನು ಹೇಳಲೋ ಬೇಡವೋ ಎಂದು ಕೆಲವು ಕ್ಷಣ ಚಿಂತಿಸಿ ಕಡೆಗೆ, "ವೈದ್ಯದೇವನನ್ನು ಕುರಿತು ಮಾಯಾ ಸರೋವರೇಶ್ವರನ ಪರಮ ಶತ್ರುಗಳಾದ, ಜಲವ್ಯಕರಾಕ್ಷಸರಿಗೂ, ಮಾಯಾ ಸರೋವರೇಶ್ವರನ ಅನುಚರರಿಗೂ ತಿಳಿಯದಿರುವ ರಹಸ್ಯವೊಂದಿದೆ. ಆತನೂ ಜಯಶೀಲನ ಹಾಗೆಯೇ ಅಮರಾವತೀ ನಗರ ನಿವಾಸಿಯಾಗಿದ್ದಾನೆ" ಎಂದನು.

"ಏನೇನು? ಜಯಶೀಲನು ಅಮರಾವತೀ ನಗರದವನೇನು? ಆ ದೇಶದ ರಾಜ ರುದ್ರಸೇನನು ನನ್ನ ಪ್ರಬಲ ಶತ್ರು. ನಾನು ಕಷ್ಟದಲ್ಲಿರುವುದನ್ನು ತಿಳಿದು, ಅವನು ನನ್ನ ಮೇಲೆ ಯುದ್ಧಕ್ಕೆ ಹೊರಡುವ ಎತ್ತುಗಡೆಯಲ್ಲಿದ್ದಾನೆಂತಲೂ ಗೂಢಚಾರರಿಂದ ತಿಳಿದುಬಂದಿದೆ. ಅವನ ಕಡೆಯವನಾದ ಜಯಶೀಲ ನನ್ನು ಹೇಗೆ ನಂಬುವುದು? ಅವನಿಗೆ ಇಷ್ಟು ದೊಡ್ಡ ಜವಾಬ್ದಾರಿಯ ಕೆಲಸ ಒಪ್ಪಿಸಿದ್ದು ಎಂಥ ದೊಡ್ಡ ತಪ್ಪು!" ಎಂದನು ಕನಕಾಕ್ಷರಾಜ ಕೋಪದಿಂದ.

"ಒಂದು ನಿಶ್ಚಯ ಮಹಾರಾಜರೆ. ಜಯಶೀಲನು ನಂಬಿದವರಿಗೆ ದ್ರೋಹ ಮಾಡುವವನಲ್ಲ. ಅವನ ಪ್ರಾಮಾಣಿಕತೆಯ ಮೇಲೆ ಅನುಮಾನಪಡಬೇಡಿರಿ. ಅವನು ಯಾವದೇಶದ ಪ್ರಜೆಯಾದರೂ ತಮಗೆ ಮಾತು ಕೊಟ್ಟ ಹಾಗೆ ಯುವರಾಣಿ ಯುವರಾಜ

ರನ್ನು ಹುಡುಕಿ ತರುವ ಕಾರ್ಯ ನೆರವೇರಿಸಿ ತೀರುತ್ತಾನೆಂದು ನಾನು ನಿಮಗೆ ಮಾತುಕೊಡುತ್ತೇನೆ. ಒಂದು ದೇಶದ ರಾಜನು ಶತ್ರುವಾದರೂ ಪ್ರಜೆಗಳೂ ಶತ್ರುವಾಗ ಬೇಕಾಗಿಲ್ಲವಷ್ಟೆ?" ಎಂದನು ಸಿದ್ಧಸಾಧಕ.

ಅವನು ಮಾತಾಡಿ ಮುಗಿಸುವುದರೊಳಗೆ ಸ್ವಲ್ಪ ದೂರದಲ್ಲಿದ್ದ ನರಭಕ್ಷಕರ ಗುಂಪಿನಲ್ಲಿ ಏನೋ ಕಲಕಲವೆದ್ದಿತು. ಅದಕ್ಕೇನು ಕಾರಣವೆಂದು ಸಿದ್ಧಸಾಧಕನು ಆ ಕಡೆಗೆ ನೋಡುತ್ತಿರಲು, ನರಭಕ್ಷಕರ ನಾಯಕ ಹೆಬ್ಬುಲಿಹೆಗ್ಗನೂ ವೃದ್ಧ ಪೂಜಾರಿಯೂ ಅವನ ಬಳಿಗೆ ಓಡುತ್ತಾ ಬಂದು, "ಭೂತರಾಜಾ, ನಿಮ್ಮಂಥ ನಾಲ್ಕು ಮಂದಿ ಮನುಷ್ಯರು ಹತ್ತು ಹನ್ನೆರಡು ಮಂದಿ ಜಲವ್ಯಕರಾಕ್ಷಸರೊಂದಿಗೆ ಜಗಳವಾಡಿಕೊಂಡಿದ್ದಾರೆ. ನಾವು ಅವರಿಗೆ ಸಹಾಯ ಮಾಡಲು ಹೋಗಬಹುದೆ? ಅಲ್ಲಿ ನಮಗಿಷ್ಟು ಆಹಾರವಾದರೂ ಸಿಕ್ಕೀತು. ಅಪ್ಪಣೆ ಕೊಡಿ" ಎಂದರು.



ಆ ಸುದ್ದಿ ಕಿವಿಗೆ ಬಿದ್ದಕೂಡಲೇ ಸರ್ಪನಖನು ತನ್ನ ಕುದುರೆಯ ಮೇಲೆ ಹಾರಿ ಕುಳಿತು, "ಸಾಧಕಾ, ಅವರು ಯಾರೆಂದರೆ, ನನ್ನ ತಮ್ಮ ಸರ್ಪಸ್ವರ, ವೈದ್ಯದೇವ ಮತ್ತು ಹಂಸರಥದಲ್ಲಿದ್ದ ನಮ್ಮ ಯಜಮಾನರ ಅಂಗರಕ್ಷಕ," ಎಂದು ಹೇಳಿ ಆ ಕಡೆಗೇ ಹೊರಟನು.

"ಜೈ ಮಹಾಕಾಳಾ!" ಎಂದು ಗರ್ಜಿಸುತ್ತಾ ಸಿದ್ಧಸಾಧಕನು ನರವಾನರದ ಭುಜದ ಮೇಲೆ ಹಾರಿ ಕುಳಿತು, ಕನಕಾಕ್ಷರಾಜನೊಂದಿಗೆ, "ಮೊದಲು ಆ ನೀರು ರಾಕ್ಷಸರ ಕಾಟದಿಂದ ನಮ್ಮವರನ್ನು ಕಾಪಾಡಬೇಕು" ಎಂದು ಹೇಳಿ ಸರ್ಪನಖನ ಹಿಂದೆಯೇ ಹೋದನು.

"ಓ ಓ! ಅರಣ್ಯದೇವರೇ! ನಮ್ಮ ಹಸಿವನ್ನು ಬೇಗ ತೀರಿಸಮ್ಮಾ! ತುಂಬಾ ಹೆಣ ಬೀಳಲೀ!" ಎಂದು ನರಭಕ್ಷಕರು ಅರಚುತ್ತಾ ಅವರ ಹಿಂದೆ ಓಡತೊಡಗಿದರು. ಸರ್ಪನಖನೂ ಸಿದ್ಧಸಾಧಕನೂ ಹೋಗಿ ನೋಡುವಾಗ, ಜಲವ್ಯಕರೊಂದಿಗೆ ಹೋರಾಡುವ ಸರ್ಪಸ್ವರನು ತನ್ನ ಕತ್ತಿಯಿಂದ ಅವರನ್ನು ತಿವಿಯಲು ನೋಡುತ್ತಿದ್ದನು. ಜಲವ್ಯಕರು ತಪ್ಪಿಸಿಕೊಳ್ಳುತ್ತ, ವೈದ್ಯದೇವನೆಂದು ಕರೆಯಲ್ಪಡುವ ದೇವಶರ್ಮನನ್ನೂ, ಹಂಸರಥದ ಸಾರಥಿಯನ್ನೂ ಕುಂಟನಾದ ಮಂಗಳವರ್ಮನನ್ನೂ ಹಿಡಿಯಲು ನೋಡುತ್ತಿದ್ದರು. ದೇವಶರ್ಮನು ಅವರನ್ನು ತನ್ನ ವಜ್ರ ತಲೆಯ ದಂಡವನ್ನೆತ್ತಿ ನಿವಾರಿಸುತ್ತ, ಹಿಂದೆ ಹಿಂದೆ ಸರಿಯುತ್ತ. "ಎಲೋ! ಮೂಢರೆ! ಜಾಗ್ರತೆ! ಈ ದಂಡದ ತುದಿಯಲ್ಲಿರುವ ಮುಳ್ಳುಗಳು ಕ್ರೂರ ವಿಷದಿಂದ ತುಂಬಿವೆ. ನಿಮ್ಮ ಶರೀರಗಳಿಗೆ ಇದು ತಾಗಿದರೆ ಆ ಕ್ಷಣವೇ ಸಾಯುವಿರಿ!" ಎಂದು ಕೂಗಿ ಎಚ್ಚರಿಸುತ್ತಿದ್ದನು.

ಹಾಗಿರುವಾಗಲೇ ಅಲ್ಲಿಗೆ ಸಿದ್ಧಸಾಧಕನೂ, ಸರ್ಪನಖನೂ ಬಂದರು. ದೂರದಲ್ಲಿ ಕೂಗು ಹಾಕುತ್ತಾ ನರಭಕ್ಷಕರೂ, ಕತ್ತಿ ಝಳಪಿಸಿಕೊಂಡು ರಾಜನ ಭಟರೂ ಸಹಾ ಅಲ್ಲಿಗೇ ಬರುತ್ತಿದ್ದರು.





ಅವರನ್ನು ನೋಡಿದ ಕೂಡಲೇ ಜಲವೃಕರಿಗೆ ದಿಗಿಲು ಹಿಡಿಯಿತು. ಅವರು ಓಡಿಹೋಗಲು ಹವಣಿಸುವುದನ್ನು ನೋಡಿ, ಅವರ ನಾಯಕನಾದ ಜಲವೃಕನೊಬ್ಬ "ನಿಲ್ಲಿರಿ. ಇವರನ್ನು ಜೀವದಿಂದ ಹಿಡಿದು ತರಲು ಸಾಧ್ಯವಾಗದಿದ್ದರೆ ಕೊಂದು ತರ ಬೇಕೆಂದು ನಮ್ಮೊಡೆಯ ಹೇಳಿದ್ದಾನಷ್ಟೆ? ಹಾಗೇ ಮಾಡಿಬಿಡೋಣ." ಎಂದು ಕಲ್ಲಿನ ಗದೆಯನ್ನೆತ್ತಿ ದೇವಶರ್ಮನನ್ನು ಹೊಡೆಯಲು ಮುಂದಕ್ಕೆ ಹಾರಿದನು.

ದೇವಶರ್ಮನು ಒಂದಡಿ ಹಿಂದೆ ಹಾರಿ, "ನಿನಗೆ ಸಾವು ಬರೆದಿದೆ. ನಾನೇನು ಮಾಡಲಿ?" ಎನ್ನುತ್ತಾ ತನ್ನ ದಂಡದ ಕೊನೆಯಿಂದ ಜಲವೃಕ ನಾಯಕನ ಶರೀರದ ಮೇಲೆ ಹೊಡೆದನು. ಆ ಕ್ಷಣವೇ ಅವನು ಕೆಟ್ಟದನಿಯಿಂದ ಕಿರಿಚಿ ಕೆಳಗೆಬಿದ್ದು ತಟಪಟನೆ ಹೊರಳ ತೊಡಗಿದನು.

ದೇವಶರ್ಮನು ತನ್ನ ದಂಡವನ್ನು ಮೇಲೆತ್ತಿ, "ಎಲವೋ! ಸಾಯದೆ ಬದುಕಿರುವ ಜಲವೃಕಗಳೇ! ಸರೋವರದಲ್ಲಿರುವ ಮಾಯಾ ಸರೋವರೇಶ್ವರನ ಕುಮಾರಿ ಪದ್ಮಮುಖಿಗಾಗಲೀ, ಕಾಂಚನವರ್ಮನಿಗಾಗಲೀ, ಏನಾದರೂ ಕೆಡುಕಾಯಿತೆಂದರೆ, ನಿಮ್ಮ ರಾಜನನ್ನು ನಿಮ್ಮೆಲ್ಲರೊಂದಿಗೆ ನಿರ್ಮೂಲ ಮಾಡಿಬಿಡುತ್ತೇನೆ. ನನ್ನ ದಂಡದ ಪ್ರಭಾವ ಗೊತ್ತಾಯಿತಷ್ಟೆ? ಜಾಗ್ರತೆ! ಬೇಗನೆ ಹೋಗಿ ನಿಮ್ಮ ರಾಜನೊಂದಿಗೆ ಹೇಳಿರಿ." ಎಂದನು. ತಮ್ಮ ನಾಯಕ ಸತ್ತದ್ದು ನೋಡಿ ಜಲವೃಕರಾಕ್ಷಸರು ತುಂಬ ಹೆದರಿ ಹಾಹಾಕಾರ ಮಾಡುತ್ತ, ಅರಣ್ಯದೊಳಗೆ ಓಡಿಹೋಗ ತೊಡಗಿದರು.

ಸರ್ಪನಖನು ದೇವಶರ್ಮನ ಬಳಿಗೆ ಅವಸರದಿಂದ ಬಂದು ಕುದುರೆಯಿಂದಿಳಿದು, "ವೈದ್ಯದೇವಾ, ಮಾಯಾ ಸರೋವರೇಶ್ವರನೂ, ಕಾಂಚನಮಾಲೆಯೂ, ಜಯಶೀಲನೂ, ಜಲವೃಕ ರಾಕ್ಷಸರ ಅಪಾಯವನ್ನು ತಿಳಿಯದೆ ಸರೋವರಕ್ಕೆ ಹೋಗುತ್ತಿದ್ದಾರಷ್ಟೆ? ನಾವು ಮುಂದಾಗಿ ಹೋಗಿ ಅವರಿಗೆ ಎಚ್ಚರಿಕೆ ಕೊಡಬೇಡವೇ?" ಎಂದನು.

"ಆ ಕೆಲಸ ಮಾಡಬೇಕಾದವರು ನೀವಿಬ್ಬರು ಅಣ್ಣತಮ್ಮಂದಿರು ಮತ್ತು ಹಂಸರಥವನ್ನು ಓಡಿಸಿಕೊಂಡು ಬಂದವನು. ಹೊರಡಿರಿ, ಹೊರಡಿರಿ!" ಎಂದ ದೇವಶರ್ಮ.

ಸರ್ಪನಖ ಸರ್ಪಸ್ವರರು ತಮ್ಮ ಜಲಾಶ್ವವನ್ನು, ವೇಗವಾಗಿ ಓಡಿಸಿಕೊಂಡುಹೋದರು. ಅಂಗರಕ್ಷಕನು ಸಮೀಪದಲ್ಲಿದ್ದ ಮರಗಳ ಹಿಂದೆ ಹೋಗಿ, ಅಲ್ಲಿದ್ದ ಹಂಸರಥವನ್ನು ಆಕಾಶಕ್ಕೆ ಹಾರಿಸಿದನು. ನರಭಕ್ಷಕರು ಉತ್ಸಾಹದಿಂದ ಕೂಗಾಡುತ್ತ, ಓಡುತ್ತಿರುವ ಜಲವೃಕ ರಾಕ್ಷಸರ ಬೆಂಬತ್ತಿ ಓಡಿದರು. —(ಇನ್ನೂ ಇದೆ)






# ವೀರಹನುಮಾನ್

ಗಂಧಮಾದನದಿಂದ ಅಯೋಧ್ಯೆಗೆ ಹೊರಟ ಹನುಮಂತನು ದಾರಿಯಲ್ಲಿ ವಾಲ್ಮೀಕಿಯ ಆಶ್ರಮದಲ್ಲಿ ಇಳಿದು, ವಾಲ್ಮೀಕಿ ಮುನಿಗೆ ನಮಸ್ಕಾರ ಮಾಡಿ, "ಮಹಾನುಭಾವರೇ, ಅಯೋಧ್ಯೆಯಲ್ಲಿ ನಡೆದ ಘೋರವನ್ನೆಲ್ಲಾ ಕೇಳಿ ತಿಳಿದೆನು. ಸೀತಾರಾಮರಿಗೆ ಹೀಗಾಯಿತೆಂದರೆ ನಂಬುವುದೇ ಕಷ್ಟವಾಗಿದೆ. ಅದೇಕೆ ಹೀಗಾಯಿತು?" ಎಂದುಕೇಳಿದನು.

ಹನುಮಂತನ ಪ್ರಶ್ನೆ ಕೇಳಿ, ವಾಲ್ಮೀಕಿ ಮುಗುಳ್ನಗೆ ಸೂಸಿ, "ಹನುಮಂತಾ, ರಾಜ್ಯಪಾಲನೆ ಮಾಡುವುದೆಂದರೆ ಎಷ್ಟು ಕಠೋರವೋ? ಶಂಬುಕನಂತಹ ಪರಮ ಸಾಧುವಾದ ನಿರಪರಾಧಿಗಳು, ಅಧಿಕಾರ ವರ್ಗದವರ ಪ್ರಾಬಲ್ಯದಿಂದ ಹೇಗೆ ಬಲಿಯಾಗುವರೋ? ಕೇಳಿದೆಯಷ್ಟೆ? ಅದುಮಾತ್ರವಲ್ಲದೆ ಪಾಪವನ್ನು ಗಂಟುಕಟ್ಟಿ ಕೊಳ್ಳಬೇಕಾಗುವುದೆಂದು ಗೊತ್ತಿದ್ದರೂ, ಮಾಯಾವಿಗಳ ದುಷ್ಟಬುದ್ಧಿಯ ಬಾಯಿಗಳಿಂದ ಹೊರಬೀಳುವ ವಿಷಬೀಜಗಳು ಪಾಮರ ಪ್ರಜೆಗಳಲ್ಲಿ ಹುಟ್ಟಿ ಬೆಳೆಯದಂತೆ ನೋಡಿಕೊಳ್ಳಲು ಎಂತಹ ತ್ಯಾಗಗಳನ್ನು ಮಾಡಬೇಕಾಗಿ ಬರುವುದೋ ತಿಳಿಯಿತಷ್ಟೆ? ಇದೆಲ್ಲಾ ನಿರೂಪಣೆಯಾಗಲಿಕ್ಕಾಗಿಯೇ ಹೀಗೆಲ್ಲಾ ನಡೆಯಿತೆಂದು ಹೇಳಬಹುದೇ ಹೊರತು ಬೇರೆ ಸಮಾಧಾನವೇನಿದೆ? ಇದು ನಿನ್ನಂತಹ ತಿಳಿದವನಿಗೆ ಅನೂಹ್ಯವಾದುದೇನಲ್ಲ. ಹೆಚ್ಚಿಗೆ ನಾನು ಬಿಡಿಸಿ ಹೇಳಬೇಕೇ?" ಎಂದನು.

ಹನುಮಂತನು ವಾಲ್ಮೀಕಿಯ ಆಶ್ರಮದಲ್ಲಿ ಸೀತೆ ಇದ್ದ ಕುಟೀರವನ್ನೂ, ಲವಕುಶರು ಮರಗಳ ಕಾಂಡಗಳಲ್ಲಿ ಬಾಣಗಳಿಂದ ಮಾಡಿದ ಗುರುತುಗಳನ್ನೂ ಮನದಣಿಯುವಂತೆ ನೋಡಿದನು. ಸೀತೆ ಸಂಚರಿಸಿದ ನೆಲವನ್ನು ಕಣ್ಣಿಗೆ ಅದ್ದಿಕೊಂಡು ಆ ಮೇಲೆ ವಾಲ್ಮೀಕಿ ಮುನಿಯ ಅಪ್ಪಣೆ ಪಡೆದು, ಅಯೋಧ್ಯೆಯ ಕಡೆಗೆ ಹಾರಿದನು.

ಹನುಮಂತನು ಆಕಾಶಮಾರ್ಗದಲ್ಲಿ ಅಯೋಧ್ಯೆಯನ್ನು ತಲಪಿ ರಾಜಭವನದ ಮುಂದೆ ಇದ್ದ ಉದ್ಯಾನವನದಲ್ಲಿ ಇಳಿದನು. ಆ ವಿಶಾಲವಾದ ಉದ್ಯಾನ ಪ್ರದೇಶದಲ್ಲಿ ಕುಶಲವರು ಬಿಲ್ಲು ವಿದ್ಯೆಗಳಲ್ಲಿ ವಿನೋದಿ

೪೩. ಶತ್ರುಶೇಷ ನಿರ್ಮೂಲನ



"ನಿನ್ನ ಮಾತು ನಂಬಲಾರೆವು. ಗದೆ ಗಿದೆ ಹಿಡಿದು ಕೊಂಡು ಹನುಮಂತನ ವೇಷ ಹಾಕಿಕೊಂಡುಬಂದ ಯಾವನೋ ಮಾಯಾವಿ ನೀನು. ಮಾರೀಚನು ನಿನಗೇನಾಗಬೇಕು ?" ಎನ್ನುತ್ತಾ ಲವನು ಬಿಲ್ಲನ್ನೆತ್ತಿ ಬಾಣಹೂಡಿದನು.

"ದುಡುಕ ಬಾರದೋ ಲವಾ" ಎಂದು ಕುಶನು ಲವನನ್ನು ಶಾಂತಪಡಿಸುತ್ತ, ರಾಮನಂತೆ ಶಾಂತ ಸ್ವರದಿಂದ, "ನೀನು ಹನುಮಂತನೆಂದು ಹೇಳಿದರೆ ಸಾಲದು. ನಿರೂಪಿಸಿದ ಹೊರತು ನಿನ್ನನ್ನು ಕದಲಲು ಬಿಡಲಾರೆವು. ಹನುಮಂತನಿಗಿರುವ ಶಕ್ತಿಸಾಮರ್ಥ್ಯ ನಿನಗಿದೆಯೇನು ?" ಎಂದನು.

"ಹೌದು. ಹನುಮಂತನ ಪ್ರತಾಪಗಳನ್ನು ತೋರಿಸು. ಮೊದಲು ನಿನ್ನ ಪ್ರಬಲ ವಿಶ್ವರೂಪ ತೋರಿಸು." ಎಂದನು ಲವ.

ಹನುಮಂತನು ದೊಡ್ಡದಾಗಿ ಬೆಳೆದು ಅವರಿಬ್ಬ ರನ್ನೂ ಆಲಿಂಗನ ಮಾಡಿಕೊಂಡನು. ಅವರನ್ನು ತನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಆಕಾಶಕ್ಕೆ ಹಾರಿ ಸರಯೂ ನದಿಯ ಮೇಲಿಂದಾಗಿ ಅಯ್ಯೋಧ್ಯಾ ನಗರದ ಸುತ್ತಲೂ ತಿರುಗಾಡಿದನು. ಆಕಾಶದಷ್ಟೆತ್ತರ ಬೆಳೆದು ಸೀತೆಗೆ ತೋರಿಸಿದ ವಿಶ್ವರೂಪವನ್ನು ತೋರಿಸಿದನು. ಬಾಲವನ್ನು ಬೆಳೆಸಿ ಗಿರಿಗಿರಿ ತಿರುಗಿಸಿ ಸುತ್ತುಸುತ್ತಿ ಕೋಟೆ ಕಟ್ಟಿ ತೋರಿಸಿದನು. ಲವಕುಶ ರನ್ನು ಭುಜಗಳ ಮೇಲೇರಿಸಿಕೊಂಡು, "ಮೈರಾವಣ ಸಂಹಾರದಲ್ಲಿ ರಾಮಲಕ್ಷ್ಮಣರನ್ನು ಹೀಗೆಯೇ ಹೊತ್ತುಕೊಂಡೆನು" ಎಂದು ಕೋಟೆಯ ಗೋಡೆಗಳ ಮೇಲೆ ಸುತ್ತಲೂ ತಿರುಗಾಡಿದನು. ಲವಕುಶರಿಗಾದ ಆನಂದಕ್ಕೆ ಮೇರೆ ಇರಲಿಲ್ಲ.

ಲವಕುಶರು ಹನುಮಂತನಿಗೆ ನಮಸ್ಕಾರ ಮಾಡಿ, "ಹನುಮಂತಾ, ನಿನ್ನ ಪ್ರತಾಪಗಳನ್ನು ಕಣ್ಣು ತುಂಬಾ ನೋಡಬೇಕೆಂದೇ ನಿನ್ನನ್ನು ಆಟ ಆಡಿಸಿದೆವು. ನಮ್ಮನ್ನು ಕ್ಷಮಿಸು" ಎಂದರು.

ಸುತ್ತಿದ್ದರು. ಅವರಿಬ್ಬರ ನಡುವೆ ಬಾಣಗಳಿಂದಲೇ ಆದ ಒಂದು ಸ್ತಂಭವು ಭವನದಷ್ಟೆತ್ತರಕ್ಕೆ ಎದ್ದಿತ್ತು. ಅಲ್ಲಿ ಬಂದಿಳಿದ ಹನುಮಂತನನ್ನು ನೋಡಿ ಲವ ಕುಶರು ಆಶ್ಚರ್ಯ ಪಟ್ಟರು. ಆಮೇಲೆ ತಮ್ಮೊಳಗೆ ಏನೋ ಕಣ್ಣು ಸನ್ನೆ ಮಾಡಿಕೊಂಡು, ಇಬ್ಬರೂ ಸುಮ್ಮನೆ ನಿಂತ ಹನುಮಂತನ ಸುತ್ತಲೂ ಬಾಣ ಗಳಿಂದಲೇ ಒಂದು ಬೇಲಿಯನ್ನು ಕಟ್ಟಿದರು.

ಅನಂತರ ಸಮೀಪ ಬಂದು, "ಮಾಯಾವಿಯೇ ? ಯಾರು ನೀನು? ನಿಜ ಹೇಳು !" ಎಂದು ಲವನು ಗದರಿಸಿ ಕೇಳಿದನು.

ಲವನಲ್ಲಿ ಸೀತೆಯ ಹೋಲಿಕೆ ಹೆಚ್ಚಾಗಿದ್ದಿತು. ಕುಶನಲ್ಲಿ ರಾಮನ ಹೋಲಿಕೆ ಕಾಣುತ್ತಿತ್ತು. ಅವರಿಬ್ಬ ರನ್ನು ನೋಡಿದಾಗ ಹನುಮಂತನಿಗೆ ಸೀತಾರಾಮ ರನ್ನೇ ನೋಡಿದಂತಾಯಿತು. ಕಣ್ಣಿಗೆ ಹಬ್ಬವಾಗು ವಂತೆ ಅವರನ್ನು ನೋಡುತ್ತ, "ನಾನು ಹನುಮಂತ. ರಾಮನನ್ನು ನೋಡಲು, ಬಂದೆನು" ಎಂದನು.



"ನಿಮ್ಮ ಕೋರಿಕೆ ತೀರಿಸಬೇಕೆಂತಲೇ ನಾನೂ ನಿಮ್ಮನ್ನು ಆಡಿಸಿದೆ ಗೊತ್ತಾ?" ಎಂದ ಹನುಮಂತನೂ ಮುಗುಳುನಗುತ್ತ.

ಲವಕುಶರು ಅವನ ಇಬ್ಬದಿಗಳಲ್ಲಿ ಕೈಗಳನ್ನು ಹಿಡಿದುಕೊಂಡು ರಾಮನಬಳಿಗೆ ಕರೆದುಕೊಂಡು ಹೋಗಿ, "ಅಪ್ಪಾ, ನೋಡಿರಿ, ನಿಮ್ಮ ಹನುಮಂತ ಬಂದಿದ್ದಾನೆ!" ಎಂದರು.

ರಾಮನು ಹನುಮಂತನನ್ನು ನೋಡಿದ ಕೂಡಲೇ ದುಃಖಾತಿಶಯದಿಂದ ಮಾತಾಡಲಾರದವನಾಗಿ ಕಣ್ಣೀರು ತುಂಬಿಕೊಂಡನು. ಹನುಮಂತನು ರಾಮನ ಮುಂದೆ ಮೊಣಕಾಲೂರಿ ನಮಸ್ಕರಿಸಿ, "ರಾಮಾ, ನೀನು ಕೂಡಾ, ಪಾಮರರಂತೆ ದುಃಖಕ್ಕೆ ವಶನಾದರೆ ಹೇಗೆ? ರಾಜ್ಯಪಾಲನೆ ಸುಖಭೋಗಗಳ ಹೂವಿನ ಹಾಸಿಗೆಯಲ್ಲವೆಂತಲೂ, ಎಂತಹ ಕೆಲಸವನ್ನಾದರೂ ಮಾಡಿಸುವಂತಹುದೆಂತಲೂ, ಎಂತಹ ತ್ಯಾಗವನ್ನಾದರೂ ಮಾಡಬೇಕಾಗಿ ಬರುವುದೆಂತಲೂ ಗೊತ್ತಿರುವುದಲ್ಲವೆ? ಮುಂದಿನ ಯುಗಗಳಲ್ಲಿ ಕೂಡಾ ರಾಮರಾಜ್ಯವೆಂದು ಆದರ್ಶವಾಗಿ ಹೇಳಿಕೊಳ್ಳಲು ಹೀಗೆಲ್ಲಾ ನಡೆಯುವುದೆಂದು ಜ್ಞಾನಿಗಳು ಹೇಳುತ್ತಾರೆ. ನಿನ್ನಿಂದ ನಡೆಯುವ ಎಲ್ಲಾ ಕಾರ್ಯಗಳಲ್ಲಿಯೂ ಏನೋ ಒಂದು ಪರಮಾರ್ಥವಿದ್ದೇ ಇರುತ್ತದೆ. ಅರ್ಥಮಾಡಿಕೊಳ್ಳಬಲ್ಲವರಿಗೆ ಅದೆಲ್ಲಾ ಗೊತ್ತಾಗುತ್ತದೆ. ನೀನು ಲೀಲಾಮಾನುಷನಾಗಿರುವ ಅವತಾರ ಪುರುಷನಾದುದರಿಂದ ಸುಖದುಃಖಗಳಲ್ಲಿ ನಿರ್ಲಿಪ್ತನಾಗಿರಬೇಕಾದವನು. ನಿನ್ನ ಈ ದುಃಖವೂ ಆ ಲೀಲೆಯೊಳಗಿನದೇ ಎಂದು ನಾನು ನಂಬುತ್ತೇನೆ. ಇನ್ನು ಸಾಕು." ಎಂದು ಹೇಳಿದನು.

ಆಗ ರಾಮನು ಹನುಮಂತನನ್ನು ನೋಡಿ, "ಹನುಮಾನ್, ನಿನ್ನನ್ನು ನೋಡಿ, ನಿನ್ನ ಮಾತುಗಳನ್ನು ಕೇಳಿ ನನಗೆಷ್ಟೋ ಸಮಾಧಾನವಾಯಿತು. ಸೀತೆ ಇಲ್ಲದ ದುಃಖಕ್ಕೆ ಜತೆಯಾಗಿ, ಈಗ ಕೈಕೊಂಡಿರುವ ಅಶ್ವಮೇಧಯಾಗವು ವಿಫಲವಾದರೆ ನಿನ್ನ ರಾಮನು ದಕ್ಕಲಾರನು. ಯಾಗಾಶ್ವವೀಗ ಮಣಿಪುರದ ಕಡೆಗೆ ಹೋಗುತ್ತಿದೆ ಎಂದು ಗೊತ್ತಾಗಿದೆ. ಅಶ್ವರಕ್ಷಣೆಯ ಭಾರವನ್ನು ನಿನ್ನ ಭುಜಸ್ಕಂಧಗಳ ಮೇಲೂ ಹಾಕುತ್ತೇನೆ. ಅದಕ್ಕೇ ನಿನ್ನನ್ನು ಕರೆಯಿಸಿದೆನು. ಅಶ್ವದ ಬೆಂಗಾವಲಿಗರಾಗಿ ನನ್ನ ಮೂವರು ತಮ್ಮಂದಿರೂ ಹೋಗಿದ್ದಾರೆ. ನೀನೂ ಅವರೊಂದಿಗಿದ್ದರೇನೇ ಎಲ್ಲವೂ ನಿರ್ವಿಘ್ನವಾಗುವುದೆಂದು ನಂಬುತ್ತೇನೆ. ಹೋಗಿ ಅವರನ್ನು ಸೇರು." ಎಂದನು.

ರಾಮನ ಆಜ್ಞೆಯನ್ನು ಸಿರಸಾವಹಿಸಿಕೊಂಡು ಹನುಮಂತನು ಆಕಾಶಮಾರ್ಗದ ಮೇಲೆ ಹಾರಿದನು.

ಗಗನಮಾರ್ಗದಲ್ಲಿ ಹನುಮಂತನು ಹೋಗುತ್ತಿರುವಾಗ, ದಟ್ಟವಾಗಿದ್ದೊಂದು ಆರಣ್ಯದಲ್ಲಿ ಒಬ್ಬಳು ರಾಕ್ಷಸಿಯೂ, ಇನ್ನೊಬ್ಬ ರಾಕ್ಷಸನೂ ವಿಜಯದ ಬೊಬ್ಬೆಗಳನ್ನು ಹಾಕುತ್ತ, ಸುರಾಪಾನದಿಂದ ಮತ್ತರಾಗಿ ಕುಣಿದು ಕುಪ್ಪಳಿಸುವುದನ್ನು ನೋಡಿದನು.



43-3



"ನೀನು ಮಾತ್ರ ಏನಂತೆ? ನಿನ್ನ ಕೋಪತಾಪ ಶೋಕಗಳು ಎಷ್ಟು ಚೆನ್ನಾಗಿದ್ದುವು ಗೊತ್ತೇ? ನನ್ನ ಒಯ್ಯಾರಿ ಅಗಸರಸುಂದರಿ ಶೂರ್ಪನಖೀ! ನನಗೆ ತಕ್ಕವಳಾಗಿ ನೀನೊಬ್ಬಳು ಸಿಕ್ಕಿದ್ದು ಎಂಥಾ ನನ್ನ ಪುಣ್ಯ!" ಎಂದು ರಾಕ್ಷಸನು ಅವಳ ಬೆನ್ನನ್ನು ಬಡಿದನು.

ಕರಾಳಕಂಠನು ಶತಕಂಠ ರಾವಣನ ತಮ್ಮ. ಯುದ್ಧದಲ್ಲಿ ಮರಣದಿಂದ ತಪ್ಪಿಸಿಕೊಂಡು ಓಡಿಹೋಗಿ, ತನ್ನ ಅಣ್ಣ ಶತಕಂಠ ರಾವಣನನ್ನು ಕೊಂದ ಸೀತೆಯ ಮೇಲೂ, ರಾಮನ ಮೇಲೂ ಹಗೆ ಸಾಧಿಸಲು ಅಗಸರವನ ರೂಪದಲ್ಲಿ ಅಯೋಧ್ಯೆಗೆ ಬಂದು ಸೇರಿದ್ದನು.

ರಾವಣಾಸುರನ ತಂಗಿ ಶೂರ್ಪಣಖಿ ಕೂಡಾ ಬದುಕಿಯೇ ಇದ್ದಳು. ಕಾಕತಾಳೀಯವಾಗಿ ಅವಳು ಕೂಡಾ ಹಗೆ ಸಾಧಿಸಲಿಕ್ಕೇ ಅಗಸರವಳ ರೂಪದಲ್ಲಿ ಅಯೋಧ್ಯೆಗೆ ಬಂದಿದ್ದಳು. ಅವರಿಬ್ಬರೂ ಸಂಧಿಸಿಕೊಂಡ ರೀತಿಕೂಡಾ ವಿಚಿತ್ರವಾಗಿತ್ತು.

ಇಬ್ಬರೂ ಹಸಿವಿನಿಂದ ಯಾವ ಮನುಷ್ಯನನ್ನಾದರೂ ಹಿಡಿದು ತಿನ್ನೋಣವೆಂದು ಊರಹೊರಗೆ ತಿರುಗಾಡುತ್ತ, ಒಬ್ಬರನ್ನೊಬ್ಬರು ನೋಡಿ ಸಮೀಪಿಸಿದರು. ಶೂರ್ಪಣಖಿ ಒಯ್ಯಾರದಿಂದ ಕುಲುಕುತ್ತ ದೃಷ್ಟಿ ಕುಣಿಸಿದಳು. ಹಸಿವೆಗೆ ಹೆಣ್ಣಿನ ಮಾಂಸವಾದರೇನಾಯಿತು? ಏನೋ ಒಂದು ತಿನ್ನದೆ ಉಪಾಯವಿಲ್ಲವೆಂದು ಕರಾಳಕಂಠನು ಅವಳ ಹಿಂದೆ ಬಿದ್ದು ಒಂದು ರಹಸ್ಯ ಪ್ರದೇಶಕ್ಕೆ ಹೋದನು. ಅಲ್ಲಿ ಅವನನ್ನು ಮುರಿದು ತಿನ್ನಲು ಸಿದ್ಧಳಾದ ಶೂರ್ಪನಖಿ ರಾಕ್ಷಸಾಕಾರದಲ್ಲಿ ಪ್ರತ್ಯಕ್ಷಳಾದಳು. "ಅರೆ! ನೀನೂ ರಾಕ್ಷಸಿಯೇನೇ?" ಎನ್ನುತ್ತಾ, ಕರಾಳನೂ ರಾಕ್ಷಸನಾಗಿ ನಿಂತನು.

ಹೀಗೆ ಅವರಿಬ್ಬರೂ ಜತೆ ಕುದುರಿಸಿಕೊಂಡು, ಅಗಸರ ದಂಪತಿಗಳಾಗಿ, ಕಪಟ ನಾಟಕವಾಡಿ,

ಹನುಮಂತನಿಗೆ ಏನೋ ಅನುಮಾನವಾಯಿತು. ಅವನು ಸೂಕ್ಷ್ಮರೂಪದಿಂದ ಅವರ ಸಮೀಪಕ್ಕೆ ಹೋಗಿ ಒಂದು ಮರದ ಮೇಲೆ ಹೊಂಚಿ ಕುಳಿತನು. ಅವರು ನೃತ್ಯ ಮಾಡುವುದನ್ನು ನಿಲ್ಲಿಸಿ, ಅದೇ ಮರದ ಕೆಳಗೆ ಸೇರಿ ಮಾತಾಡಲು ತೊಡಗಿದರು. ಹನುಮಂತನು ಕಿವಿಗೊಟ್ಟು ಕೇಳುತ್ತಿದ್ದನು. ಅವರು ನಿರ್ಭೀತಿಯಿಂದ ಗಟ್ಟಿಯಾಗಿ ಮಾತಾಡುತ್ತಿದ್ದರು.

"ಘಾತಕನಾದ ರಾಮನಿಗೆ ಹಾಗೇ ಆಗಬೇಕು. ಕರಾಳಕಂಠಾ! ನನ್ನ ಸಂತೋಷಕ್ಕೆ ಮೇರೆ ಇಲ್ಲದಂತಾಗಿದೆ. ಶತ್ರುಶೇಷವಿರಬಾರದೆಂದು ಸುಮ್ಮನೆ ಹೇಳುತ್ತಾರೆಯೇ? ಅಂಥಾ ಶತ್ರುಶೇಷವಾಗಿ ಉಳಿದ ನಾವಿಬ್ಬರು ನಮ್ಮವರ ಋಣವನ್ನು ಬಹಳ ಚೆನ್ನಾಗಿ ತೀರಿಸಿಬಿಟ್ಟೆವು. ಆಹಾ! ನೀನು ಅಗಸರವನಾಗಿ ಎಷ್ಟು ಮೊನಚಾಗಿ ಅರಚಿದೆಯೋ! ರಾಮನ ಬಾಣ ಯಾವ ಮೂಲೆಗೆ!" ಎಂದಳು ಆ ರಾಕ್ಷಸಿ. ಜತೆಗಾರನ ಬೆನ್ನು ಬಡಿಯುತ್ತಾ.



43-4

ಅಯೋಧ್ಯೆಯಿಂದ ಓಡಿಹೋಗಿ ಅರಣ್ಯ ಸೇರಿದ್ದರು. ಮರದ ಮೇಲಿರುವ ಹನುಮಂತನು ಅವರ ಮಾತನ್ನು ಆಲಿಸಿಕೊಂಡಿದ್ದನು.

ಕರಾಳಕಂಠನು ಶೂರ್ಪನಖಿಯನ್ನು ತಟ್ಟುತ್ತ, "ನನ್ನ ಪುಣ್ಯ ವಿಶೇಷದಿಂದ ನೀನೊಬ್ಬಳು ಸಿಕ್ಕಿದೆ. ಆಗ ಹನುಮಂತ ಅಲ್ಲಿ ಇಲ್ಲದಿದ್ದುದರಿಂದ ಸರಿ ಹೋಯಿತು. ಅವನು ಅಯೋಧ್ಯೆಯಲ್ಲೇ ಇರುತ್ತಿದ್ದರೆ, ನಮ್ಮ ಜಾಡು ಹಿಡಿದು ನಮ್ಮನ್ನು ಅಣ್ಣಂದಿರ ಬಳಿಗೇ ಕಳುಹಿಸುತ್ತಿದ್ದ. ನಮ್ಮ ಅದೃಷ್ಟ ಚೆನ್ನಾಗಿರುವುದರಿಂದಲೇ ಅವನಿಗೆ ಗುಡ್ಡದ ಮೇಲೆ ಕುಳಿತಿರುವ ಬುದ್ಧಿ ಬಂತು." ಎಂದನು.

"ಆ ಹನುಮಂತನನ್ನು ಹೊಗಳಿ ನನ್ನನ್ನು ರೇಗಿಸಬೇಡ. ಅವನನ್ನು ನೆನೆದರೆ ಮಹಾ ಕೋಪ ಬರುತ್ತೆ!" ಎಂದಳು ಶೂರ್ಪನಖಿ.

"ಕೋಪ ಅನ್ನಬೇಡ್ವೇ! ಎದೆ ಹಾರುತ್ತೇ ಅನ್ನು ಭಯದಿಂದ." ಎನ್ನುತ್ತಾ ಕರಾಳಕಂಠ ಹಲ್ಲು ಗಿಂಜಿದ.

"ಭಯ ನಿನಗೆ! ಆ ಬಾಲದ ಭೂತ ನನ್ನ ಬಂಗಾರದ ಮನೆಯನ್ನೇ ಸುಟ್ಟು ಕರಗಿಸಿ ಹಾಕಿದ. ಅವನ ಹೆಸರು ಕೇಳಿದರೆ ನನಗೆ ಭಯಗಿಯ ಏನೂ ಇಲ್ಲ. ಕೆಟ್ಟ ಊರಿ! ಅವನ ಬಾಲ ಕಳಚಿಬೀಳ!" ಎನ್ನುತ್ತಾ ಶೂರ್ಪನಖಿ ತನ್ನ ಬೆನ್ನನ್ನು ತಡವಿಕೊಂಡಳು.

ಅವಳ ಬೆನ್ನಿನಲ್ಲಿ ದೊಡ್ಡದೊಂದು ಸುಟ್ಟ ಮಚ್ಚೆ ಇತ್ತು. ಅದು ಲಂಕಾ ದಹನದ ವೇಳೆಯಲ್ಲಿ ಉರಿಯುವ ತೊಲೆಯೊಂದು ಅವಳ ಬೆನ್ನಿನ ಮೇಲೆ ಬಿದ್ದು ಸುಟ್ಟು ಉಂಟಾದ ಮಚ್ಚೆ.

ಕರಾಳಕಂಠನು ಅವಳ ಮಚ್ಚೆಯನ್ನು ತಡವಿ ನೋಡಿ ಅಣಕಿಸುವವನಂತೆ, "ಈ ಮುದ್ರೆ ಬಿದ್ದುದಕ್ಕಾಗಿ ಉರಿ ಅನ್ನುವಿಯಾ? ಇನ್ನೂ ಚುರು ಚುರು ಉರಿಯುತ್ತದೇನೋ ಪಾಪ! ಮನೆ ಹೋದರೂ ನೆನಪಿಗೆ ಇದೊಂದು ಮಚ್ಚೆಯಾದರೂ ಉಂಟಲ್ಲ



ಬಿಡು." ಎಂದನು. ಅವನ ಲೇವಡಿ ಮಾತಿಗೆ ಶೂರ್ಪನಖಿ ಮುಖ ಮುದುಡಿಕೊಂಡು, "ಸಾಕು ಬಿಡು, ನಿನ್ನ ಸಮಾಧಾನದ ಮಾತೋ, ನೀನೋ! ನನ್ನ ಚಿಂತೆ ನಿನಗೆ ಅರ್ಥವಾದರೆತಾನೆ?" ಎಂದು ಕೈಗಂಟಿನಿಂದ ತಿವಿದಳು.

"ಅದಲ್ಲ ಶೂರ್ಪಣೀ! ನನಗೂ ಹನುಮಂತನೆಂದರೆ ಉರಿಯುತ್ತೆ. ರಾಮನ ಗುಂಪಿನಲ್ಲಿ ಅವನೇ ಮಹಾ ಕೆಟ್ಟವನು!" ಎಂದನು.

"ಹಾಗೆ ಹೇಳು ನನ್ನರಾಜ! ಸುಮ್ಮನೆ ಮಹಾ ವೀರನ ಹಾಗೆಲ್ಲಾ ಬೊಗಳಬೇಡ. ಅವನ ಕಣ್ಣು ತಪ್ಪಿಸಿ ಓಡಿಬಂದ ದೊಡ್ಡ ಹೇಡಿ ನೀನು! ಯುದ್ಧದಲ್ಲಿ ವೀರನಂತೆ ಸಾಯಬಾರದಿತ್ತೇ?" ಎಂದಳು ಶೂರ್ಪನಖಿ.

"ಸತ್ತರೆ ಹಗೆ ತೀರಿಸೋದು ಹೇಗೇ ಅಂತ? ನಿನ್ನಂಥ ಸುಂದರಿ ರಾಕ್ಷಸಿ ಸಿಗುತ್ತಿದ್ದಳೆ? ನಿನಗಾದರೂ ಜತೆ ಸಿಗುತ್ತಿತ್ತೇ? ಆಗುವುದೆಲ್ಲಾ ಒಳ್ಳೇದಕ್ಕೇ ಅಂತ



ಈಗಾದರೂ ಗೊತ್ತಾಯಿತೆ ? " ಎಂದನು. "ಸಾಕು. ಬಿಡು. ಎಲ್ಲಾ ಚಂದಾಯ್ತು. ಇನ್ನು ಎತ್ತಾದರೂ ದೂರ ಹೋಗಿ ಹಾಯಾಗಿರೋಣ, ಏಳು ಬಾ" ಎಂದಳು ಶೂರ್ಪನಖಿ.

"ಇನ್ನೊಂದು ಕೆಲಸ ಮುಗಿಸಿ ಹೋಗಿಬಿಡುವ. ಆಮೇಲೆ ಈ ಕಡೆಗೆ ಮುಖ ತಿರುಗಿಸುವುದೇಬೇಡ. ರಾಮನ ಯಾಗಾಶ್ವವನ್ನು ನಾವು ಹಿಡಿದು ಬಿಡಬೇಕು" ಎಂದ ಕರಾಳಕಂಠ.

"ಭಲೆ ! ಆದರ ಮೇಲೆ ಸವಾರಿ ಮಾಡಿಕೊಂಡು ಹೋಗಬಹುದು" ಎಂದು ಕುಪ್ಪಳಿಸಿದಳು ಶೂರ್ಪನಖಿ.

"ಸವಾರಿಗಲ್ಲವೇ ಹುಚ್ಚು ಮೂತೀ !" ಎಂದು ಕರಾಳಕಂಠನು ಹೇಳುತ್ತಲೇ ಶೂರ್ಪನಖಿ ಅವನ ಕುತ್ತಿಗೆ ಬಳಸಿ, "ಏನು ಕಿರಿಚಿದೆ ? ಇನ್ನೊಮ್ಮೆ ಹಾಗಂದರೆ ಹಿಸುಕಿಬಿಡ್ತೇನೆ ! ನನ್ನ ಉಗುರಿನ ರುಚಿ ಗೊತ್ತಾದೀತು ! ಜಾಗ್ರತೆ ! ನನ್ನ ಮೂಗೂ ಕಿವಿಗಳೂ ಸ್ವಲ್ಪ ಮೊದ್ದು ಕಟ್ಟಿದ್ದರೂ ಚೆಂದಕ್ಕೇನು ಕಡಿಮೆಯಾಗಿದೆ ? ಲಕ್ಷ್ಮಣನು ಕೊಯ್ಯುವುದಕ್ಕೆ ಮೊದಲು ಗೇಣುದ್ದ ಮೂಗೂ ಮಾರುದ್ದ ಕಿವಿಗಳೂ ಇದ್ದುವು. ಈಗಲೇ ನನ್ನ ಮುಖ ಅಂದವಾಗಿದೆಯೆಂದು ಎಲ್ಲರೂ ಹೇಳುತ್ತಾರೆ ಗೊತ್ತಾ ? ಹೌದು, ಕಾಮಗಾಮಿಗಳಾದ ನಮಗೆ ಕುದುರೆ ಗಿದುರೆ ಏತಕ್ಕೇ ? " ಎಂದಳು.

"ಕೊಂದು ಹಾಕಲಿಕ್ಕೆ !" ಎಂದು ಕರಾಳಕಂಠನು ಹೇಳಿದುದನ್ನು ಕೇಳಿ ಶೂರ್ಪನಖಿ, "ಅಯ್ಯೋ ಪಾಪವೇ ! ಆ ಕುದುರೇ ಮೇಲೆ ನಮಗೇನು ಹಗೆ ?" ಎಂದು ತಿರುಗಿ ಕೇಳಿದಳು.

"ಕುದುರೇ ಮೇಲೆ ಹಗೆಯಿಲ್ಲವೇ ಶೂರ್ಪಣೀ ! ರಾಮನ ಮೇಲೆ ಹಗೆ. ಕುದುರೆ ಕಾಣದೆಹೋದರೆ ರಾಮನ ಯಾಗನಾಶವಾಗುತ್ತದೆ. ಆಗ ಏನಾಗುತ್ತೆ ಗೊತ್ತಾ ಮೊದ್ದು ಮುಂಡೆಯುವಳೇ ? ಸೀತೆ ಇಲ್ಲದೆ ಅರೆ ಜೀವದಲ್ಲಿರುವ ರಾಮು ಪೂರಾ ಸಾಯುತ್ತಾನೆ. ನಿನ್ನ ವೈರದ ಬಿಸಿ ಪೂರ್ತಿ ತಣ್ಣಗಾಗುತ್ತದೆ." ಎಂದ ಕರ್‍ರಾಳಕಂಠ.

"ನಿಜ ನಿಜ ! ಒಳ್ಳೇ ಆಲೋಚನೆ. ಕುದುರೆಯ ತಲೆಯ ಮಾಂಸ ಬಲುರುಚಿಯಾಗಿರುತ್ತೆ. ಆನಂದವಾಗಿ ಹೊಟ್ಟೆಯನ್ನೂ ತುಂಬಿಸಿಕೊಂಡು ಹೋಗಬಹುದು." ಎಂದಳು ಶೂರ್ಪನಖಿ.

"ತಿಂಡಿಪೋತಳು ! ನಡೆನಡೆ !" ಎಂದು ಕರಾಳನು ಮುಂದೆ ಹೊರಟನು. ಆಗ ಹನುಮಂತನು ಮರದ ಕೊಂಬೆಗಳನ್ನು ಅವರ ಮೇಲೆ ಹಾಕಲು, "ಓಹೋ ! ನಮ್ಮ ಮೇಲೆ ಹಿರಿಯರು ಹೂಮಳೆ ಸುರಿಸುತ್ತಾರಲ್ಲಾ !" ಎಂದಳು ಶೂರ್ಪನಖಿ. "ಹೂಮಳೆಯಲ್ಲವೇ, ಇದು ಮರದ ಎಲೆಗಳ ಮಳೆ" ಎಂದ ಕರಾಳ.

ಶೂರ್ಪನಖಿ ಕರಾಳಕಂಠನ ಕೈಯನ್ನು ಹಿಡಿದುಕೊಂಡು ಮುಂದಡಿ ಇಡುವಾಗ, ಹನುಮಂತನು ತನ್ನ



43-6

ಬಾಲವನ್ನು ಅವರ ದಾರಿಗೆ ಅಡ್ಡವಾಗಿ ಕಳುಹಿಸಿದನು. ಚಲಿಸಿ ಬಂದ ಅದನ್ನು ನೋಡಿ ಇಬ್ಬರೂ ಗಕ್ಕನೆ ನಿಂತರು.

"ಓಹೋಯ್! ಸರ್ಪ! ಮಹಾಸರ್ಪ!" ಎಂದು ಕೂಗಿ ಕರಾಳಕಂಠನು ಹಾರಿಬಿದ್ದನು. ಶೂರ್ಪನಖಿ ದೊಡ್ಡದಾಗಿ ಕಣ್ಣು ತಿರುಗಿಸುತ್ತ, "ಸರ್ಪವಲ್ಲ, ಬಾಲ! ಯಮಪಾಶ! ಓಹೋ! ಹನುಮಂತನ ಬಾಲ!" ಎಂದು ಕೆಟ್ಟದನಿಯಿಂದ ಕಿರಿಚಿದಳು.

"ಸುಮ್ಮನಿರೆ! ಇಲ್ಲೆಲ್ಲಿಯ ಹನುಮಂತನೇ! ನೋಡಿದಲ್ಲೆಲ್ಲಾ ನಿನಗೆ ಹನುಮಂತನದೇ ಭಯ!" ಎಂದ ಕರಾಳಕಂಠ.

"ಅಯ್ಯೋ! ನನಗ್ಗೊತ್ತು! ಲಂಕೆಯನ್ನು ಸುಟ್ಟ ಬಾಲ ಇದೇ! ಇದೇ!" ಎಂದು ಶೂರ್ಪನಖಿ ಆ ಬಾಲದ ಚಲನೆಯನ್ನು ನೋಡುತ್ತ ಗಡಗಡ ನಡುಗಿದಳು. ಶೂರ್ಪನಖಿಯ ಭಯವನ್ನು ನೋಡಿ ಕರಾಳಕಂಠನು ಒಮ್ಮೆಗೇ ಹೆದರಿ ಓಡಿಹೋಗಲು ನೋಡಿದನು. ಶೂರ್ಪನಖಿ ಹಾರಿಹೋಗಿ ಅವನನ್ನು ಗಟ್ಟಿಯಾಗಿ ಹಿಡಿದು, "ನನ್ನೊಬ್ಬಳನ್ನೇ ಬಿಟ್ಟು ಓಡಿಹೋಗುವೆಯಾ!" ಎಂದು ಕೂಗುತ್ತಾ ಅವನನ್ನು ಬಿಗಿಯಾಗಿ ಹಿಡಿದಳು. ಹನುಮಂತನು ಭೀಕರಾಕಾರ ತಾಳಿ ಅವರ ಮುಂದೆ ನಿಂತನು.

ರಾಕ್ಷಸರಾಕ್ಷಸಿಯರು ಓಡಲು ದಾರಿಯಿಲ್ಲದೆ ಭೀಕರಾಕಾರ ತಾಳಿ ಹನುಮಂತನ ಮೇಲೆಯೇ ಬಿದ್ದು ಹಿಂಸಿಸ ತೊಡಗಿದರು. ಹನುಮಂತನು ದೊಡ್ಡದೊಂದು ಶಿಲಾಪರ್ವತವನ್ನೆತ್ತಿ ಅವರ ಮೇಲೆ ಹಾಕಿ, ಇಬ್ಬರನ್ನೂ ಒಂದೇಬಾರಿ ಕೊಂದನು. ಹೀಗೆ ಶತ್ರುಶೇಷ ಅಳಿಯಿತು.

ತನ್ನ ಕೈಯಿಂದಲೇ ಶತ್ರುಶೇಷವು ನಾಶವಾದುದನ್ನು ನೋಡಿ ಹನುಮಂತನಿಗೆ ಬಹಳ ಸಂತೋಷವಾಗಿ, ದೊಡ್ಡ ಸಿಂಹನಾದ ಮಾಡಿ ಆಕಾಶಕ್ಕೆ ಹಾರಿ ಮಣಿಪುರದ ದಿಕ್ಕಿಗೆ ಸಾಗಿದನು.

ಹನುಮಂತನು ಗಗನಮಾರ್ಗದಲ್ಲಿ ಹೋಗುತ್ತಾ, ಸುಂದರವಾದ ವನಗಳ ನಡುವೆ ಸೀಳಿಕೊಂಡು ಹರಿಯುವ ಗಂಗಾನದಿಯನ್ನು ದಾಟಿ ಮಣಿಪುರರಾಜ್ಯವನ್ನು ಸಮೀಪಿಸಿದನು. ದೂರದಲ್ಲಿ ಬ್ರಹ್ಮಪುತ್ರಾ ನದಿ ಬೆಳ್ಳಿಯ ಬೆಟ್ಟವು ಕರಗಿ ಹರಿಯುತ್ತಿರುವಂತೆ ಮಿರಿಮಿರಿ ಹೊಳೆಯುತ್ತಿದ್ದಿತು.

ಅಷ್ಟರಲ್ಲಿ ಮಣಿಪುರರಾಜ್ಯದ ಮೇರೆಯಲ್ಲಿರುವ ಆಕಾಶದಲ್ಲಿ ಒಂದು ಮಿಂಚು ಮಿಂಚಿ ದೊಡ್ಡ ಧ್ವನಿಯಿಂದ ರಿವ್ವನೆ ತೂರಿಕೊಂಡು ಹೋಗುವಂತೆ ಕಂಡಿತು. ಅದನ್ನು ನೋಡಿ ಹನುಮಂತನು ಆ ಮಿಂಚನ್ನು ಮಿಂಚುವ ವೇಗದಿಂದ ಆ ಕಡೆಗೇ ಹಾರಿ ಹೋದನು.



43-8